**ಸರ್ಕಾರದ ಆದೇಶದ ಸಂಖ್ಯೆ: ಸಿಒ 105 ಸಿಎಲ್ಎಂ 2010 ದಿನಾಂಕ: 20.11.2010**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30–ಬಿ ರಡಿ ಈಗಾಗಲೆ ಹೊರಡಿಸಿರುವ ಉಲ್ಲೇಖ (2) ಮತ್ತು (3) ರ ನಿರ್ದೇಶನಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ. ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ದೃಷ್ಟಿಯಿಂದ ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸಲು ಸಹಕಾರಿಯಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30–ಬಿ ರಡಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಗೃಹ ನಿರ್ಮಾಣ ಸಹಕಾರ ಸಂಘಗಳನ್ನು ನೋಂದಾಯಿಸುವ ಮುನ್ನ ಉಲ್ಲೇಖ (1)ರಂತೆ ಹೊರಡಿಸಿರುವ ಆದೇಶದಂತೆ ಮಾದರಿ ಉಪನಿಯಮಗಳ ಜೊತೆಗೆ ಈ ಕೆಳಕಂಡ ಅಂಶಗಳನ್ನು ಅಳವಡಿಸಲು ಎಲ್ಲಾ ನೋಂದಣಿ ಪ್ರಾಧಿಕಾರಿಗಳು ಅಗತ್ಯ ಕ್ರಮವಿಡಲು ಹಾಗೂ ಈಗಾಗಲೆ ನೋಂದಣಿಯಾಗಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ತಮ್ಮ ಉಪನಿಯಮಗಳಲ್ಲಿ ಈ ಅಂಶಗಳನ್ನು ಕಡ್ಡಾಯವಾಗಿ ಅಳವಡಿಸಿಕೊಳ್ಳಲು ನಿರ್ದೇಶಿಸಿದೆ.

1) ಉಲ್ಲೇಖ (1)ರ ಆದೇಶದಂತೆ ಹೊರಡಿಸಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾದರಿ ಉಪನಿಯಮದ ಸಂಖ್ಯೆ: 10(ಆ) ರ ನಂತರ ಈ ಕೆಳಕಂಡ ಅವಕಾಶವನ್ನು ಸೇರಿಸಿಕೊಳ್ಳತಕ್ಕದ್ದು.

"ನೌಕರರ ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿ ಸದಸ್ಯರು ನಿವೃತ್ತಿ ಹೊಂದಿದ ನಂತರವೂ ಆತನ / ಆಕೆಯ ಸದಸ್ಯತ್ವ ಮುಂದುವರೆಯುತ್ತದೆ"

2) ಉಲ್ಲೇಖ (1) ರ ಆದೇಶದಂತೆ ಹೊರಡಿಸಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾದರಿ ಉಪನಿಯಮದ ಸಂಖ್ಯೆ: 11(ಈ) ರ ನಂತರ ಈ ಕೆಳಕಂಡ ಅವಕಾಶವನ್ನು ಸೇರಿಸಿ ಕೊಳ್ಳತಕ್ಕದ್ದು.

ಮೇಲ್ಕಂಡ ನಾಲ್ಕು ಅಂಶಗಳ ಬಗ್ಗೆ ಸಂಘವು ನಿಗಧಿಪಡಿಸಿದ ನಮೂನೆಯಲ್ಲಿ ರೂ 20–00 ರ "ನಾನ್ ಜ್ಯೂಡೀಷಿಯಲ್" ಛಾಪಾ ಕಾಗದದಲ್ಲಿ ಸದಸ್ಯರಿಂದ ಪ್ರಮಾಣ ಪತ್ರ (ಅಫಿಡವಿಟ್) ಪಡೆಯತಕ್ಕದ್ದು.

3) ಉಲ್ಲೇಖ (1) ರ ಆದೇಶದಂತೆ ಹೊರಡಿಸಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾದರಿ ಉಪನಿಯಮದ ಸಂಖ್ಯೆ: 20(ಅ)ಗೆ ಬದಲಾಗಿ ಈ ಕೆಳಕಂಡ ಅವಕಾಶವನ್ನು ಅಳವಡಿಸಿಕೊಳ್ಳತಕ್ಕದ್ದು.

"ಸಹ–ಸದಸ್ಯರು ಸಂಘದಲ್ಲಿ ಷೇರುಗಳನ್ನು ಹೊಂದಬಹುದು ಹಾಗೂ ಜೇಷ್ಠತೆಗೆ ಅನುಗುಣವಾಗಿ ನಿವೇಶನವನ್ನು ಪಡೆಯಲು ಅರ್ಹರಾಗಿದ್ದು, ಸಂಘದ ಸಾಮಾನ್ಯ ಸದಸ್ಯರಂತೆ, ಸಂಘದ ಪದಾಧಿಕಾರಿಯಾಗಲು ಹಾಗೂ ಮತ ಚಲಾಯಿಸುವ ಹಕ್ಕನ್ನು ಹೊರತುಪಡಿಸಿ, ಇತರೆ ಎಲ್ಲಾ ಹಕ್ಕು ಭಾದ್ಯತೆಗಳನ್ನು ಹೊಂದಲು ಸಹ–ಸದಸ್ಯರೂ ಸಹ ಅರ್ಹರಿರುತ್ತಾರೆ."

4) ಉಲ್ಲೇಖ (1) ರ ಆದೇಶದಂತೆ ಹೊರಡಿಸಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾದರಿ ಉಪನಿಯಮದ ಸಂಖ್ಯೆ 53 ರ ಬದಲಾಗಿ ಈ ಕೆಳಕಂಡ ಅವಕಾಶವನ್ನು ಅಳವಡಿಸಿಕೊಳ್ಳತಕ್ಕದ್ದು.

"ನಿವೇಶನಗಳು/ ಮನೆಗಳು/ ಫ್ಲಾಟ್‌ಗಳು/ ಅಪಾರ್ಟ್‌ಮೆಂಟ್‌ಗಳನ್ನು ಜೇಷ್ಠತೆಗೆ ಅನುಗುಣವಾಗಿ ಮಂಜೂರು ಮಾಡುವ ಪದ್ದತಿಯನ್ನು ಸಂಘ ಅಳವಡಿಸಬೇಕು.

ಅ) ಮೃತ ಸದಸ್ಯರ ಕಾನೂನುಬದ್ಧ ಉತ್ತರಾಧಿಕಾರಿ ಅರ್ಜಿಸಿದ ಪ್ರಸಂಗದಲ್ಲಿ ಆ ವ್ಯಕ್ತಿಯ ಜೇಷ್ಠತೆಯು ಮೂಲ ಷೇರು ಮಂಜೂರು ಮಾಡಿದ ದಿನಾಂಕದಿಂದ ಅನ್ವಯಿಸುತ್ತದೆ. ಉಳಿದ ಪ್ರಸಂಗದಲ್ಲಿ ಷೇರು ವರ್ಗಾವಣೆಯ ಜೇಷ್ಠತೆಯು ಆ ವ್ಯಕ್ತಿಗೆ ಷೇರು ವರ್ಗಾಯಿಸಿದ ದಿನಾಂಕದಿಂದ ಅನ್ವಯಿಸುತ್ತದೆಯೇ ಹೊರತು ಮೂಲ ಷೇರು ಮಂಜೂರು ಮಾಡಿದ ದಿನಾಂಕದಿಂದಲ್ಲ.

ಆ) ಮಾದರಿ ಉಪನಿಯಮದ ಸಂಖ್ಯೆ 10ರ ರೀತ್ಯಾ ಅರ್ಹರಾಗಿರುವ ಸದಸ್ಯರಿಗೆ ಹಾಗೂ ಮಾದರಿ ಉಪನಿಯಮದ ಸಂಖ್ಯೆ 20(ಅ) ರೀತ್ಯಾ ಅರ್ಹರಾಗಿರುವ ಸಹ–ಸದಸ್ಯರಿಗೆ ನಿವೇಶನ/ಗೃಹ/ಫ್ಲಾಟ್/ಅಪಾರ್ಟ್‌ಮೆಂಟ್‌ಗಳನ್ನು ಹಂಚಿಕೆ ಮಾಡತಕ್ಕದ್ದು. ನಿವೇಶನ/ಗೃಹ/ಫ್ಲಾಟ್/ ಅಪಾರ್ಟ್‌ಮೆಂಟ್‌ಗಳ ಹಂಚಿಕೆಯಲ್ಲಿ ಮಾದರಿ ಉಪನಿಯಮದ ಸಂಖ್ಯೆ 10ರ ರೀತ್ಯಾ ಅರ್ಹರಾಗಿರುವ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.

ಇ) ನೌಕರರ ಗೃಹ ನಿರ್ಮಾಣ ಸಹಕಾರ ಸಂಘದ ಅರ್ಹ ಸದಸ್ಯರು ತನ್ನ ಉದ್ಯೋಗದ ಬಗ್ಗೆ ಮತ್ತು ಕರ್ನಾಟಕದಲ್ಲಿನ ಸೇವಾವಧಿ ಕುರಿತು ತನ್ನ ಉದ್ಯೋಗದಾತನಿಂದ ದೃಢೀಕರಣ ಪತ್ರ ಹಾಜರುಪಡಿಸಬೇಕು.

ಈ) ನೌಕರರ ಗೃಹ ನಿರ್ಮಾಣ ಸಹಕಾರ ಸಂಘದ ಅರ್ಹ ಸಾಮಾನ್ಯ ಸದಸ್ಯರನ್ನು ಹೊರತುಪಡಿಸಿ ಅರ್ಹ ಸಹ–ಸದಸ್ಯರು ಮತ್ತು ಇತರೆ ಸಾಮಾನ್ಯ ಗೃಹ ನಿರ್ಮಾಣ ಸಹಕಾರ ಸಂಘದ ಅರ್ಹ ಸದಸ್ಯರು 10 ವರ್ಷಗಳಿಗೆ ಕಡಿಮೆ ಇಲ್ಲದಷ್ಟು ಕಾಲ ಕರ್ನಾಟಕ ರಾಜ್ಯದಲ್ಲಿ ತಾವು ವಾಸವಾಗಿರುವ ಬಗ್ಗೆ ಸೂಕ್ತ ಅಧಿಕಾರಿ ನೀಡಿದ ವಾಸದ ಧೃಡೀಕರಣ ಪತ್ರ ಹಾಜರುಪಡಿಸಬೇಕು.

ಉ) ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಸದಸ್ಯರು /ಸಹ–ಸದಸ್ಯರು, ಸೂಕ್ತ ಅಧಿಕಾರಿ ಕೊಟ್ಟ ಜಾತಿಯ ಸರ್ಟಿಫಿಕೇಟ್ ಹಾಜರುಪಡಿಸಬೇಕು. ಮಂಜೂರಾತಿಗಳ ಶೇಕಡ 15 ರಷ್ಟನ್ನು ಪರಿಶಿಷ್ಠ ಜಾತಿಯ ಅರ್ಹ ಸದಸ್ಯರಿಗೆ/ಅರ್ಹ ಸಹ–ಸದಸ್ಯರಿಗೆ ನೀಡತಕ್ಕದ್ದು ಮತ್ತು ಶೇಕಡ 3 ರಷ್ಟು ಮಂಜೂರಾತಿಗಳನ್ನು ಪರಿಶಿಷ್ಟ ವರ್ಗದ ಅರ್ಹ ಸದಸ್ಯರಿಗೆ / ಅರ್ಹ ಸಹ–ಸದಸ್ಯರಿಗೆ ನೀಡತಕ್ಕದ್ದು. ಅಂತಹ ಸದಸ್ಯರು ಲಭ್ಯವಿಲ್ಲದಿದ್ದರೆ ಸಹಕಾರ ಸಂಘಗಳ ನಿಬಂಧಕರ ಪೂರ್ವಾನುಮತಿಯೊಂದಿಗೆ ಪರಿಶಿಷ್ಠ ಜಾತಿ/ಪರಿಶಿಷ್ಟ ವರ್ಗದ ಸದಸ್ಯರಿಗೆ ನೀಡಬೇಕಾದ ನಿವೇಶನ/ಗೃಹ/ ಫ್ಲಾಟ್/ಅಪಾರ್ಟ್‌ಮೆಂಟ್‌ಗಳನ್ನು ಇತರೆ ಅರ್ಹ ಸದಸ್ಯರಿಗೆ/ಅರ್ಹ ಸಹ–ಸದಸ್ಯರಿಗೆ ಮಂಜೂರು ಮಾಡಬಹುದಾಗಿದೆ."

5) ಉಲ್ಲೇಖ (1) ರ ಆದೇಶದಂತೆ ಹೊರಡಿಸಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಮಾದರಿ ಉಪನಿಯಮದ ಸಂಖ್ಯೆ: 53ಕ್ಕೆ ಹೊಸದಾಗಿ ಈ ಕೆಳಕಂಡಂತೆ ಅವಕಾಶ ಸೇರಿಸಿ ಈ ಕೆಳಗಿನಂತೆ ಓದತಕ್ಕದ್ದು.

"ಇನ್‌ಸ್ಟ್ರುಮೆಂಟ್ (ದಸ್ತಾವೇಜು)ಗಳ ಮಾರಾಟ ಅಥವಾ ವರ್ಗಾವಣೆಗೆ ಇರುವ ಕಡ್ಡಾಯ ನೋಂದಣಿ ವಿನಾಯಿತಿಯು ಸಹಕಾರ ಸಂಘಗಳ ಕಾಯಿದೆಯಡಿ ನೋಂದಣಿಯಾದ ಗೃಹ ನಿರ್ಮಾಣ ಸಹಕಾರ ಸಂಘಗಳಿಂದ ಅಥವಾ ಅವುಗಳ ಪರವಾಗಿ ವರ್ಗಾವಣೆ ಮಾಡಲು ಉದ್ದೇಶಿಸಿರುವ ನಿವೇಶನ : ಫ್ಲಾಟ್, ಕಟ್ಟಡ ಅಥವಾ ವಾಸ್ತವವಾಗಿ ವರ್ಗಾಯಿಸುವ ಸ್ಥಿರಾಸ್ತಿಯ ಹಕ್ಕುಭಾದ್ಯತೆಗಳ ಇನ್‌ಸ್ಟ್ರುಮೆಂಟ್ (ದಸ್ತಾವೇಜು)ಗಳಿಗೆ ಅನ್ವಯಿಸುವುದಿಲ್ಲ."

6) ಗೃಹ ನಿರ್ಮಾಣ ಸಹಕಾರ ಸಂಘಗಳಲ್ಲಿ ಲಭ್ಯತೆಯ ಆಧಾರದ ಮೇಲೆಯೇ ಸದಸ್ಯತ್ವವನ್ನು ನೋಂದಾಯಿಸಲು ಕ್ರಮವಿಡತಕ್ಕದ್ದು. ಆದರೆ, ಗೃಹ ನಿರ್ಮಾಣ, ಗೃಹ ಖರೀದಿ, ಮನೆ ರಿಪೇರಿ ಇತ್ಯಾದಿ ಉದ್ದೇಶಕ್ಕಾಗಿ ಸಾಲ ಕೋರಿ ಸದಸ್ಯತ್ವ ಬಯಸುವವರಿಗೆ ಈ ಅಂಶ ಅನ್ವಯಿಸುವುದಿಲ್ಲ.

7) ಗೃಹ ನಿರ್ಮಾಣ ಸಹಕಾರ ಸಂಘಗಳು ತನ್ನ ಸದಸ್ಯರಿಗೆ ನಿವೇಶನ ನೋಂದಣಿ ಮಾಡುವ ಮುನ್ನ ನೈಜ ಸದಸ್ಯರ ಜೇಷ್ಠತಾ ಪಟ್ಟಿ ಹಾಗೂ ನಿವೇಶನ ಠೇವಣಿದಾರರ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಸಹಕಾರ ಸಂಘಗಳ ನಿಬಂಧಕರಿಂದ ಕಡ್ಡಾಯವಾಗಿ ಅನುಮೋದನೆಯನ್ನು ಪಡೆಯತಕ್ಕದ್ದು.

8) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಮೈಸೂರು ಅಭಿವೃದ್ಧಿ ಪ್ರಾಧಿಕಾರ ಹಾಗೂ ಇನ್ನಿತರ ಸ್ಥಳೀಯ ಅಭಿವೃದ್ಧಿ ಪ್ರಾಧಿಕಾರದವರು ರಚಿಸುವ ಬಡಾವಣೆಗಳಲ್ಲಿ ಸದರಿ ಬಡಾವಣೆಯ ನೀಲಿ ನಕ್ಷೆಗೆ ಸಂಬಂಧಿಸಿದ ಪ್ರಾಧಿಕಾರದಿಂದ ಅನುಮೋದನೆ ದೊರೆತು ನಿವೇಶನ ಬಿಡುಗಡೆಯಾದ ನಂತರ ನಿವೇಶನ ಹಂಚಿಕೆ ಮಾಡುವ ರೀತಿಯಲ್ಲಿಯೇ, ಗೃಹ ನಿರ್ಮಾಣ ಸಹಕಾರ ಸಂಘಗಳು ಸಹ ತಮ್ಮ ಬಡಾವಣೆಯ ನೀಲಿನಕ್ಷೆಗೆ ಸಂಬಂಧಿಸಿದ ಪ್ರಾಧಿಕಾರದಿಂದ ಅನುಮೋದನೆ ದೊರೆತ ನಂತರವೇ ತಾತ್ಕಾಲಿಕ ನಿವೇಶನ ಹಂಚಿಕೆ ಪತ್ರವನ್ನು ವಿತರಿಸತಕ್ಕದ್ದು.

9) ಗೃಹ ನಿರ್ಮಾಣ ಸಹಕಾರ ಸಂಘಗಳು ನಗರಾಭಿವೃದ್ಧಿ ಪ್ರಾಧಿಕಾರದಿಂದ, ಭೂಸ್ವಾಧೀನದ ಮೂಲಕ, ಕರ್ನಾಟಕ ಭೂಸುಧಾರಣಾ ಅಧಿನಿಯಮದ ಪ್ರಕರಣ 109ರಡಿ ಕೃಷಿ ಭೂಮಿಯನ್ನು ನೇರವಾಗಿ ಖರೀದಿಸುವ ಮೂಲಕ, ಸಂಘದ ಹೆಸರಿನಲ್ಲಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ, ಭೂಪರಿವರ್ತನೆಯಾದ ಜಮೀನನ್ನು ಖರೀದಿಸುವ ಮೂಲಕ ಬಡಾವಣೆ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳತಕ್ಕದ್ದು ಅಥವಾ ಬಡಾವಣೆ ನಿರ್ಮಾಣಕ್ಕೆ ಅಗತ್ಯವಿರುವ ಪ್ರಾಧಿಕಾರಗಳಿಂದ ಅನುಮತಿ ಪಡೆದು ಎಲ್ಲಾ ಮೂಲಭೂತ ಸೌಲಭ್ಯವಿರುವ ಬಡಾವಣೆ ನಿರ್ಮಿಸುವ ಅಭಿವೃದ್ಧಿದಾರರಿಂದ ಟರ್ನ್ ಕೀ ಆಧಾರದ ಮೇಲೆ ನಿವೇಶನಗಳನ್ನು ನೇರವಾಗಿ ಸ್ಪರ್ಧಾತ್ಮಕ ದರದಲ್ಲಿ ಖರೀದಿಸಿ ಸದಸ್ಯರಿಗೆ ಹಂಚತಕ್ಕದ್ದು.

10) ಸಂಘದ ಆಡಳಿತ ಮಂಡಳಿಗೆ ನಿವೇಶನ ಹಂಚಿಕೆಯಲ್ಲಿ ಶೇಕಡಾ 5ರಷ್ಟು ಮಾತ್ರ ವಿವೇಚನಾ ಕೋಟಾ ಇರತಕ್ಕದ್ದು.

11) ಬಡಾವಣೆ/ಗೃಹ/ಪ್ಲಾಟ್/ಅಪಾರ್ಟ್‌ಮೆಂಟ್‌ಗಳನ್ನು ನಿರ್ಮಾಣ ಮಾಡುವ ವ್ಯವಹಾರವನ್ನು ಸಂಘದ ಉಪನಿಯಮದಲ್ಲಿ ಉದ್ದೇಶವಾಗಿ ಹೊಂದಿರುವ ಎಲ್ಲಾ ಸಹಕಾರ ಸಂಘಗಳು ಮೇಲ್ಕಂಡ ನಿರ್ದೇಶನಗಳನ್ನು ಹಾಗೂ ಕಾಲಕಾಲಕ್ಕೆ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30–ಬಿ ಅನ್ವಯ ಚಾಲ್ತಿಯಲ್ಲಿರುವ ನಿರ್ದೇಶನಗಳನ್ನು ಕಡ್ಡಾಯವಾಗಿ ತಮ್ಮ ಉಪನಿಯಮದಲ್ಲಿ ಸಂಬಂಧಿಸಿದ ಕಂಡಿಕೆಗಳಲ್ಲಿ ಸೂಕ್ತವಾಗಿ ತಿದ್ದುಪಡಿ ಮಾಡಿಕೊಳ್ಳಲು ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ


# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಸೋಮವಾರ, ನವೆಂಬರ್ ೨೨, ೨೦೧೦ (ಮಾರ್ಗಶಿರ ೧, ಶಕ ವರ್ಷ ೧೯೩೨) | ನಂ. ೧೫೮೫ |
|---|---|---|


## ಆರ್ಥಿಕ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 2010, ಬೆಂಗಳೂರು, ದಿನಾಂಕ: 19.11.2010**

ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) ನಿಯಮಗಳು, 2002ಕ್ಕೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು ಸಲಹೆಗಳನ್ನು ಆಹ್ವಾನಿಸಿ ದಿನಾಂಕ 15ನೇ ಸೆಪ್ಟೆಂಬರ್ 2010ರಂದು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ಅಧಿಸೂಚನೆ ಸಂಖ್ಯೆ ಎಫ್‌ಡಿ 02 ಎಸ್‌ಆರ್‌ಎ 2010, ದಿನಾಂಕ: 13.09.2010ನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ (ಎ)ರ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ 15ನೇ ಸೆಪ್ಟೆಂಬರ್ 2010ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:–

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ.–** (1) ಈ ನಿಯಮಗಳನ್ನು, ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) (1ನೇ ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇವು ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 3ನೇ ನಿಯಮದ ತಿದ್ದುಪಡಿ.–** ಕರ್ನಾಟಕ ಸರ್ಕಾರಿ ನೌಕರರ (ಕುಟುಂಬ ನಿವೃತ್ತಿ ವೇತನ) ನಿಯಮಗಳು 2002ರ, (ಇನ್ನು ಮುಂದೆ ಸದರಿ ನಿಯಮಗಳು ಎಂದು ಉಲ್ಲೇಖಿಸಲಾಗಿದೆ) 3ನೇ ನಿಯಮದ, (ಜಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಹೆಚ್) 1ನೇ ಏಪ್ರಿಲ್ 2006ರಂದು ಅಥವಾ ತರುವಾಯ ರಾಜ್ಯ ಸರ್ಕಾರದ ಸೇವೆಗೆ ಸೇರಿದ ನೂತನ ನೌಕರರು."

**3. 4ಎ ಹೊಸ ನಿಯಮದ ಸೇರ್ಪಡೆ.–** ಸದರಿ ನಿಯಮಗಳ, 4ನೇ ನಿಯಮದ ತರುವಾಯ, ಈ ಮುಂದಿನದನ್ನು 1ನೇ ಜುಲೈ 2005ರಿಂದ ಜಾರಿಗೆ ಬರುವಂತೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

"**4ಎ.** (1) 4ನೇ ನಿಯಮದ ಉಪಬಂಧಗಳಿಗೆ ಒಳಪಟ್ಟು, ಸರ್ಕಾರಿ ನೌಕರನು, ನಿರಂತರವಾಗಿ ಒಂದು ವರ್ಷಕ್ಕಿಂತ ಕಡಿಮೆ ಇಲ್ಲದ ಅವಧಿಗೆ ಸೇವೆ ಸಲ್ಲಿಸಿ, ಸೇವೆಯಲ್ಲಿರುವಾಗಲೇ ಅಥವಾ ನಿವೃತ್ತಿಯ ತರುವಾಯ ಅಥವಾ 1ನೇ ಜುಲೈ 2005ರಂದು ಅಥವಾ ನಂತರ, ಮೃತಪಟ್ಟರೆ, ಕುಟುಂಬ ನಿವೃತ್ತಿ ವೇತನವು ತಿಂಗಳಿಗೆ ಕನಿಷ್ಠ ರೂ.2250/– ಮತ್ತು ಗರಿಷ್ಠ ರೂ.11,970 ಗಳಿಗೆ ಒಳಪಟ್ಟು ಉಪಲಬ್ಧಿಗಳ ಶೇಕಡ 30ಕ್ಕೆ ಸಮನಾದ ಹೆಚ್ಚಿಸಿದ ದರದಲ್ಲಿ ಅನ್ವಯವಾಗತಕ್ಕದ್ದು.

ಪರಂತು, 1.7.2005ರಿಂದ 31.3.2006ರ ವರೆಗಿನ ಕುಟುಂಬ ನಿವೃತ್ತಿ ವೇತನದಲ್ಲಿನ ಬದಲಾವಣೆಗಳು ಕೇವಲ ಏಣಿಕೆಗಷ್ಟೆ ಆಗಿದ್ದು ಯಾವುದೇ ಆರ್ಥಿಕ ಸೌಲಭ್ಯ ಪ್ರಾಪ್ತವಾಗುವುದಿಲ್ಲ.

(2) ವಿವಿಧ ನಿವೃತ್ತಿ ಮತ್ತು ಮರಣದ ಸೌಲಭ್ಯಗಳು ಮತ್ತು ಕುಟುಂಬ ನಿವೃತ್ತಿ ವೇತನವನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ ಉಪಲಬ್ಧಿಗಳು ಎಂದರೆ ನಿವೃತ್ತಿ ಅಥವಾ ಮರಣದ ದಿನಾಂಕದಂದು ಅವನು ಹೊಂದಿದ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಸರ್ಕಾರಿ ನೌಕರನು ಪಡೆಯುತ್ತಿದ್ದ ಮೂಲ ವೇತನ ಹಾಗೂ ಈ ಕೆಳಕಂಡವು ಸಹ ಒಳಗೊಳ್ಳತಕ್ಕದ್ದು,–

(ಎ) ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವನಿಗೆ ಯಾವುದಾದರೂ ಸ್ಥಗಿತವೇತನ ಬಡ್ತಿ ಮಂಜೂರಾಗಿದ್ದರೆ ಆ ಸ್ಥಗಿತ ವೇತನ ಬಡ್ತಿ.

(ಬಿ) ಕರ್ನಾಟಕ ಸಿವಿಲ್ ಸೇವೆಗಳ (ಪರಿಷ್ಕೃತ ವೇತನ) ನಿಯಮಗಳು, 2007ರ 7ನೇ ನಿಯಮದ (3)ನೇ ಉಪ ನಿಯಮದ ಅಡಿಯಲ್ಲಿ ಅವನಿಗೆ ವೈಯಕ್ತಿಕ ವೇತನ ಯಾವುದಾದರೂ ಮಂಜೂರು ಮಾಡಿದ್ದರೆ ಆ ವೈಯಕ್ತಿಕ ವೇತನ;

(ಸಿ) ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ 9ನೇ ಮೇ, 2002ರ ಪ್ರಕಾರ ಕಾಲವೇತನ ಶ್ರೇಣಿಯ ಗರಿಷ್ಠವನ್ನು ಮೀರಿ ಮಂಜೂರಾದ ಹೆಚ್ಚುವರಿ ವೇತನ ಬಡ್ತಿಗಳು,"

4. **5ನೇ ನಿಯಮದ ತಿದ್ದುಪಡಿ.–** 5ನೇ ನಿಯಮದ (1)ನೇ ಉಪ ನಿಯಮದಲ್ಲಿ, "ಮರಣದ ದಿನಾಂಕದಿಂದ ಜಾರಿಗೆ ಬರುವಂತೆ" ಎಂಬ ಪದಗಳಿಗೆ ಬದಲಾಗಿ, "ಮರಣದ ದಿನದ ಮುಂದಿನ ದಿನಾಂಕದಿಂದ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

5. **5ಎ ಹೊಸ ನಿಯಮದ ಸೇರ್ಪಡೆ.–** ಸದರಿ ನಿಯಮಗಳ 5ನೇ ನಿಯಮ ತರುವಾಯ, ಈ ಮುಂದಿನದನ್ನು 1ನೇ ಜುಲೈ, 2005ರಿಂದ ಜಾರಿಗೊಳಿಸಿ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

**"5ಎ** (1) ಏಳು ವರ್ಷಗಳಿಗಿಂತ ಕಡಿಮೆ ಇಲ್ಲದ ಅರ್ಹತಾದಾಯಕ ಸೇವೆ ಸಲ್ಲಿಸಿದ ನಂತರ ಸೇವೆಯಲ್ಲಿರುವಾಗಲೇ ಮೃತನಾದ ಸರ್ಕಾರಿ ನೌಕರನ ಸಂಬಂಧದಲ್ಲಿ, ಕುಟುಂಬ ನಿವೃತ್ತಿ ವೇತನವು ಕೊನೆಯಲ್ಲಿ ಪಡೆಯುತ್ತಿದ್ದ ಉಪಲಬ್ಧಿಗಳ ಶೇಕಡ 50ರ ಹೆಚ್ಚಿಸಿದ ದರದಲ್ಲಿ ಅಥವಾ ಸಾಮಾನ್ಯವಾಗಿ ಅಂಗೀಕಾರಾರ್ಹವಾದ ಕುಟುಂಬ ನಿವೃತ್ತಿ ವೇತನದ ಎರಡರಷ್ಟು ಇದರಲ್ಲಿ ಯಾವುದು ಕಡಿಮೆಯೋ ಅದನ್ನು, ಏಳು ವರ್ಷಗಳ ಅವಧಿಯವರೆಗೆ ಅಥವಾ ಸರ್ಕಾರಿ ನೌಕರನು ಜೀವಂತವಾಗಿದ್ದರೆ ಅವನು 67ವರ್ಷಗಳ ವಯಸ್ಸನ್ನು ತಲುಪುವ ದಿನಾಂಕದವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅನುಮತಿಸತಕ್ಕದ್ದು. ಮೇಲೆ ಹೇಳಿದ ಅವಧಿ ನಂತರ ಸಂದಾಯ ಮಾಡಬೇಕಾದ ಕುಟುಂಬ ನಿವೃತ್ತಿ ವೇತನವು 4ಎ ನಿಯಮದಲ್ಲಿ ನಿರ್ದಿಷ್ಟಪಡಿಸಿದ ದರಗಳಲ್ಲಿ ಇರತಕ್ಕದ್ದು.

ಪರಂತು, 1.7.2005ರಿಂದ 31.3.2006ರ ವರೆಗೆ ಕುಟುಂಬ ನಿವೃತ್ತಿ ವೇತನದಲ್ಲಿನ ಬದಲಾವಣೆಗಳು ಕೇವಲ ಏಣಿಕೆಗಷ್ಟೆ ಆಗಿದ್ದು ಯಾವುದೇ ಆರ್ಥಿಕ ಸೌಲಭ್ಯಗಳು ಪ್ರಾಪ್ತವಾಗತಕ್ಕದ್ದಲ್ಲ.

6. **6ಎ ಹೊಸ ನಿಯಮದ ಸೇರ್ಪಡೆ.–** ಸದರಿ ನಿಯಮಗಳ 6ನೇ ನಿಯಮದ ನಂತರ, ಮುಂದಿನವುಗಳು 1ನೇ ಜುಲೈ, 2005ರಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು ಎಂದರೆ:–

**"6ಎ.** ಸರ್ಕಾರಿ ನೌಕರರಾಗಿದ್ದ ತಂದೆ ಮತ್ತು ತಾಯಿ ಇಬ್ಬರು 1ನೇ ಜುಲೈ 2007ರಂದು ಅಥವಾ ನಂತರ ಮೃತಪಟ್ಟ ಸಂದರ್ಭದಲ್ಲಿ, ಈ ನಿಯಮಗಳ ಅಡಿಯಲ್ಲಿ ಅಪ್ರಾಪ್ತ ಮಕ್ಕಳಿಗೆ ಸಂದಾಯ ಮಾಡಬಹುದಾದ ಕುಟುಂಬ ನಿವೃತ್ತಿ ವೇತನವು ಪ್ರತಿ ತಿಂಗಳಿಗೆ ಗರಿಷ್ಠ ರೂ. 11,970/– ಗೆ ಒಳಪಟ್ಟಿರತಕ್ಕದ್ದು.

ಪರಂತು, 1.7.2005ರಿಂದ 31.3.2006ರ ವರೆಗೆ ಕುಟುಂಬ ನಿವೃತ್ತಿ ವೇತನದಲ್ಲಿನ ಬದಲಾವಣೆಗಳು ಕೇವಲ ಏಣಿಕೆಗಷ್ಟೇ ಆಗಿದ್ದು ಯಾವುದೇ ಆರ್ಥಿಕ ಸೌಲಭ್ಯಗಳು ಪ್ರಾಪ್ತವಾಗತಕ್ಕದ್ದಲ್ಲ"

7. **10ಎ ನಿಯಮದ ಸೇರ್ಪಡೆ.–**ಸದರಿ ನಿಯಮಗಳ 10ನೇ ನಿಯಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"10ಎ.** ನಿವೃತ್ತಿ ವೇತನ, ಸೇವಾ ನಿವೃತ್ತಿ ವೇತನ ಅಥವಾ ಅಸಮರ್ಥತಾ ನಿವೃತ್ತಿ ವೇತನದ ಮೇಲೆ ಮಿಲಿಟರಿ ಸೇವೆಯಿಂದ ನಿವೃತ್ತನಾದ ನಿವೃತ್ತಿ ವೇತನದಾರನು, ಸಂಬಂಧಪಟ್ಟ ನಿಯಮಗಳ ಮೇರೆಗೆ ಭೂಸೇನೆ ಅಥವಾ ನೌಕಾ ಅಥವಾ ವಾಯುದಳದ ಸೂಚನೆಗಳ ಮೂಲಕ ಸಾಮಾನ್ಯ ಕುಟುಂಬ ನಿವೃತ್ತಿ ವೇತನದ ಮಂಜೂರಾತಿ ಅನ್ವಯವಾಗುತ್ತಿದ್ದು, ವಯೋ ನಿವೃತ್ತಿ ತಲುಪುವ ಮುಂಚೆಯೇ ರಾಜ್ಯದ ಒಂದು ಸಿವಿಲ್ ಹುದ್ದೆಗೆ ನೇಮಕವಾಗಿದ್ದರೆ, ಈ ನಿಯಮದ ಮೇರೆಗೆ ಅಂಗೀಕಾರಾರ್ಹ ಕುಟುಂಬ ನಿವೃತ್ತಿ ವೇತನಕ್ಕೆ ಅಥವಾ ಈ ಮೇಲೆ ಹೇಳಲಾದ ಭೂಸೇನೆ / ನೌಕಾ / ವಾಯುದಳದ ಸೂಚನೆಗಳ ಮೇರಗೆ ಈಗಾಗಲೇ ಮಂಜೂರು ಮಾಡಿದ ಕುಟುಂಬ ನಿವೃತ್ತಿ ವೇತನಕ್ಕೆ ಅರ್ಹನಾಗುವ ಉದ್ದೇಶಕ್ಕಾಗಿ ಈ ಮುಂದಿನ ನಿಯಮಗಳು ಅನ್ವಯಿಸುತ್ತವೆ:–

**(i)** ಅವನು ಸಿವಿಲ್ ಹುದ್ದೆಯನ್ನು ಹೊಂದಿರುವಾಗ ಮೃತನಾದರೆ, ಅವನ ಕುಟುಂಬಕ್ಕೆ ಈ ನಿಯಮಗಳ ಮೇರೆಗೆ ಅಥವಾ ಮಿಲಿಟರಿ ಸೇವೆಯಿಂದ ನಿವೃತ್ತಿ ಹೊಂದಿದ ಅಥವಾ ಬಿಡುಗಡೆ ಮಾಡಿದ ವೇಳೆಯಲ್ಲಿ ಮಂಜೂರುಮಾಡಲಾದ ಕುಟುಂಬ ನಿವೃತ್ತಿ ವೇತನ ಇದರಲ್ಲಿ ಆ ಕುಟುಂಬಕ್ಕೆ ಯಾವುದು ಹೆಚ್ಚು ಅನುಕೂಲವೋ ಅದನ್ನು ಕುಟುಂಬ ನಿವೃತ್ತಿ ವೇತನವೆಂದು ಅನುಮತಿಸತಕ್ಕದ್ದು.

**(ii)** ಅವನು ರಾಜ್ಯ ಸಿವಿಲ್ ಸೇವೆ ಅಥವಾ ಹುದ್ದಗೆ ನೇಮಕ ಹೊಂದಿದ ಮೇಲೆ, ಹಿಂದಿನ ಮಿಲಿಟರಿ ಸೇವೆಗಾಗಿನ ಮಿಲಿಟರಿ ನಿವೃತ್ತಿ ವೇತನವನ್ನು ಉಳಿಸಿಕೊಳ್ಳಲು ಇಚ್ಛಿಸಿದರೆ,–

(ಎ) ಮತ್ತು ರಾಜ್ಯ ಸಿವಿಲ್ ಸೇವೆ ಅಥವಾ ಹುದ್ದೆಯಿಂದ ಯಾವುದೇ ನಿವೃತ್ತಿ ವೇತನಕ್ಕೆ ಅರ್ಹನಾಗದೆ ನಿವೃತ್ತನಾದರೆ, ಅವನ ಕುಟುಂಬವು, ಮಿಲಿಟರಿ ಸೇವೆಯಿಂದ ಅವನ ನಿವೃತ್ತಿ / ಬಿಡುಗಡೆಯ ವೇಳೆಯಲ್ಲಿ ಮಂಜೂರು ಮಾಡಲಾದಂಥ ಕುಟುಂಬ ನಿವೃತ್ತಿ ವೇತನಕ್ಕೆ ಹಕ್ಕುಳ್ಳವನಾಗತಕ್ಕದ್ದು.

(ಬಿ) ನಿವೃತ್ತಿ ವೇತನಕ್ಕೆ ಅರ್ಹನಾದ ತರುವಾಯ, ರಾಜ್ಯ ಸಿವಿಲ್ ಸೇವೆ ಅಥವಾ ಹುದ್ದೆಯಿಂದ ನಿವೃತ್ತನಾದರೆ, ಅವನು, ಸಿವಿಲ್ ಸೇವೆಗಾಗಿ ನಿವೃತ್ತಿ ವೇತನಕ್ಕೆ ಅರ್ಜಿ ಹಾಕುವ ವೇಳೆಯಲ್ಲಿ ಈ ನಿಯಮಗಳ ಮೇರೆಗೆ ಕುಟುಂಬ ನಿವೃತ್ತಿ ವೇತನಕ್ಕೆ ಅನ್ವಯಿಸತಕ್ಕದ್ದೆಂದು ಇಲ್ಲವೆ ಮಿಲಿಟರಿ ಸೇವೆಯಿಂದ ಅವನ ನಿವೃತ್ತಿ / ಬಿಡುಗಡೆಯ ವೇಳೆಯಲ್ಲಿ ಮಂಜೂರು ಮಾಡಿದಂಥ ಕುಟುಂಬ ನಿವೃತ್ತಿ ವೇತನದ ಸೌಲಭ್ಯಗಳು ಅನ್ವಯಿಸತಕ್ಕದ್ದೆಂದು ಆಯ್ಕೆ ಮಾಡಿಕೊಳ್ಳತಕ್ಕದ್ದು ಹಾಗೂ ಒಮ್ಮೆ ಮಾಡಿಕೊಂಡ ಆಯ್ಕೆಯು ಅಂತಿಮವಾಗಿರತಕ್ಕದ್ದು.

**(iii)** ಸಿವಿಲ್ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದಿದ ಮೇಲೆ, ಅವನು ಮಿಲಿಟರಿ ನಿವೃತ್ತಿ ವೇತನವನ್ನು ಬಿಟ್ಟುಕೊಡಲು ಮತ್ತು ಸಿವಿಲ್ ನಿವೃತ್ತಿ ವೇತನಕ್ಕಾಗಿ ಮಿಲಿಟರಿ ಸೇವೆಯನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಆಯ್ಕೆ ಮಾಡಿಕೊಂಡರೆ ಅವನ ಕುಟುಂಬವು, ಈ ನಿಯಮಗಳ ಮೇರೆಗಿನ ಕುಟುಂಬ ನಿವೃತ್ತಿ ವೇತನಕ್ಕೆ ಹಕ್ಕುಳ್ಳವರಾಗಿರತಕ್ಕದ್ದು."

ತಿದ್ದುಪಡಿ ಸಂಖ್ಯೆ: 04

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–1)

**ಅಧಿಸೂಚನೆ – *II***

**ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 2010, ಬೆಂಗಳೂರು, ದಿನಾಂಕ: 19.11.2010**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಅಧಿಕೃತ ರಾಜ್ಯ ಪತ್ರದಲ್ಲಿ ಈ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು/ಸಲಹೆಗಳನ್ನು

ಆಹ್ವಾನಿಸಿ, ದಿನಾಂಕ: 15ನೇ ಸೆಪ್ಟೆಂಬರ್ 2010ರಂದು ಕರ್ನಾಟಕ ರಾಜ್ಯ ಪತ್ರದ ಭಾಗ-4ಎ ರಲ್ಲಿ ಅಧಿಸೂಚನೆ ಸಂಖ್ಯೆ:ಎಫ್‌ಡಿ 02 ಎಸ್‌ಆರ್‌ಎ 2010, ದಿನಾಂಕ: 13ನೇ ಸೆಪ್ಟೆಂಬರ್ 2010 ಅನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8ರೊಂದಿಗೆ ಓದಿಕೊಳ್ಳಲಾಗುವ 3ನೇ ಪ್ರಕರಣದ (2)ನೇ ಉಪಪ್ರಕರಣದ ಖಂಡ(ಎ)ದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ: 15ನೇ ಸೆಪ್ಟೆಂಬರ್ 2010ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರ ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:-

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು, ಕರ್ನಾಟಕ ಸಿವಿಲ್ ಸೇವೆಗಳ (6ನೇ ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇವು ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 2 ಸಿ ಹೊಸ ನಿಯಮದ ಸೇರ್ಪಡೆ.-** ಕರ್ನಾಟಕ ಸಿವಿಲ್ ಸೇವೆಗಳ ನಿಯಮಗಳ, 2ಬಿ ನಿಯಮದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"**2ಸಿ.** 2ನೇ ನಿಯಮದ, (1)ನೇ ಉಪ ನಿಯಮದಲ್ಲಿ, ಏನೇ ಒಳಗೊಂಡಿದ್ದಾಗ್ಯೂ, ಈ ನಿಯಮಗಳ ಭಾಗ-IV 1ನೇ ಏಪ್ರಿಲ್, 2006ರಂದು ಅಥವಾ ತರುವಾಯ ರಾಜ್ಯ ಸರ್ಕಾರಿ ಸೇವೆಗೆ ಸೇರುವ ಹೊಸ ನೌಕರರಿಗೆ ಅನ್ವಯವಾಗತಕ್ಕದ್ದಲ್ಲ."

ತಿದ್ದುಪಡಿ ಸಂಖ್ಯೆ: 1271

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು-1)

**ಅಧಿಸೂಚನೆ - *III***

**ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 2010, ಬೆಂಗಳೂರು, ದಿನಾಂಕ: 19.11.2010**

ಕರ್ನಾಟಕ ಸರ್ಕಾರಿ ನೌಕರರ (ವಿಶೇಷ ನಿವೃತ್ತಿ ವೇತನ) ನಿಯಮಗಳು, 2003ಕ್ಕೆ ಇನ್ನಷ್ಟು ತಿದ್ದುಪಡಿ ಮಾಡುವ ನಿಯಮಗಳ ಕರಡನ್ನು ಅದರಿಂದ ತೊಂದರೆಗೊಳಗಾಗಬಹುದಾದ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಅಧಿಕೃತ ರಾಜ್ಯಪತ್ರದಲ್ಲಿ ಆ ಕರಡು ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಆಕ್ಷೇಪಣೆಗಳು ಸಲಹೆಗಳನ್ನು ಆಹ್ವಾನಿಸಿ ದಿನಾಂಕ 15ನೇ ಸೆಪ್ಟೆಂಬರ್ 2010ರಂದು ಕರ್ನಾಟಕ ರಾಜ್ಯಪತ್ರದ ಭಾಗ-4ಎ ರಲ್ಲಿ ಅಧಿಸೂಚನೆ ಸಂಖ್ಯೆ ಎಫ್‌ಡಿ 02 ಎಸ್‌ಆರ್‌ಎ 2010, ದಿನಾಂಕ: 13.09.2010ನ್ನು ಕರ್ನಾಟಕ ನಾಗರೀಕ ಸೇವಾ ಅಧಿನಿಯಮ 1978ರ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (2)ನೇ ಉಪ ಪ್ರಕರಣದ ಖಂಡ (ಎ) ರ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ 15ನೇ ಸೆಪ್ಟೆಂಬರ್ 2010ರಂದು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲಾಗಿದ್ದುದರಿಂದ ಮತ್ತು ಇದರ ಬಗ್ಗೆ ರಾಜ್ಯ ಸರ್ಕಾರಕ್ಕೆ ಯಾವುದೇ ರೀತಿಯ ಆಕ್ಷೇಪಣೆಗಳು/ಸಲಹೆಗಳು ಬಂದಿರುವುದಿಲ್ಲವಾದ್ದರಿಂದ;

ಈಗ 1978ರ ಕರ್ನಾಟಕ ರಾಜ್ಯ ನಾಗರೀಕ ಸೇವಾ ಅಧಿನಿಯಮದ (1990ರ ಕರ್ನಾಟಕ ಅಧಿನಿಯಮ ಸಂಖ್ಯೆ 14) ಪ್ರಕರಣ 8 ರೊಂದಿಗೆ ಓದಿಕೊಳ್ಳಲಾದ 3ನೇ ಪ್ರಕರಣದ (1)ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಈ ಕೆಳಗಿನ ನಿಯಮಗಳನ್ನು ಈ ಮೂಲಕ ಮಾಡುತ್ತದೆ, ಎಂದರೆ:-

**ನಿಯಮಗಳು**

**1. ಶೀರ್ಷಿಕೆ ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು, ಕರ್ನಾಟಕ ಸಿವಿಲ್ ಸೇವೆಗಳ (ವಿಶೇಷ ನಿವೃತ್ತಿ ವೇತನ) (1ನೇ ತಿದ್ದುಪಡಿ) ನಿಯಮಗಳು, 2010 ಎಂದು ಕರೆಯತಕ್ಕದ್ದು.

(2) ಇವು ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 1ನೇ ನಿಯಮದ ತಿದ್ದುಪಡಿ.-** ಕರ್ನಾಟಕ ಸಿವಿಲ್ ಸೇವೆಗಳ (ವಿಶೇಷ ನಿವೃತ್ತಿ ವೇತನ) ನಿಯಮಗಳು, 2003ರ, 1ನೇ ನಿಯಮದ (4)ನೇ ಉಪ ನಿಯಮದ, (XV)ನೇ ಬಾಬಿನ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:-

"(XVI) 1ನೇ ಏಪ್ರಿಲ್, 2006ರಂದು ಅಥವಾ ತರುವಾಯ ರಾಜ್ಯ ಸರ್ಕಾರಿ ಸೇವೆಗೆ ಸೇರುವ ಹೊಸ ನೌಕರರು"

ತಿದ್ದುಪಡಿ ಸಂಖ್ಯೆ: 01

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು-1)

## FINANCE SECRETARIAT

### NOTIFICATION

### No. FD 2 SRA 2010, Bangalore, Dated: 19.11.2010

Whereas the draft of the following rule further to amend the Karnataka Government Servants (Family Pension) Rules 2002, was published as required by clause(a) of sub-section-(2) of Section 3 read with section 8 of the Karnataka Civil Services Act, 1978 (Karnataka Act 14 of 1990) in Notification No. FD 02 SRA 2010, dated 13th September, 2010 in Part IVA of the Karnataka Gazette dated 15th September, 2010 inviting objection and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on dated 15th September, 2010.

And whereas, no objections and suggestions have been received by the State Government.

Now, therefore, in exercise of the powers conferred by sub-section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rule, namely:-

### RULES

***1. Title and commencement.-*** (1) These rules may be called the Karnataka Government Servants (Family Pension) (1st Amendment) Rules, 2010.

(2) They shall come into force from the date of their publication in the official Gazette.

***2. Amendment of rule 3.-*** In the Karnataka Government servants (Family Pension) Rules, 2002, (hereinafter referred to as said rules) in rule 3, after clause (g), the following shall be inserted, namely:-

"(h) New recruits to the State Government Service joining on or after 1st day of April 2006".

***3. Insertion of new rule 4A.-*** After rule 4 of the said rules, the following shall be deemed to have been inserted with effect from 1st day of July 2005, namely:-

"4A. (1) Subject to the provisions of rule 4, where a Government Servant having put in a continuous service for a period of not less than one year, dies while in service or after retirement on or after 1st July, 2005 the family pension shall be admissible at an enhanced rate equal to 30% of the emoluments subject to minimum of Rs.2250/- and maximum of Rs.11,970/- per month.

Provided that the changes in family pension from 1-7-2005 to 31-3-2006 would only be notional and no monetary benefit would accure.

(2) The term emoluments for purpose of calculating various retirement and death benefits and family pension shall mean the basic pay drawn by a Government Servant in the scale of pay applicable to the post held by him on the date of retirement/death shall also include,-

(a) Stagnation Increment, if any, granted to him above the maximum of the scale of pay.

(b) Personal pay, if any granted to him under sub-rule (3) of rule 7 of the Karnataka Civil Services (Revised Pay) Rules, 2007.

(c) Additional Increments granted beyond the Maximum of the time scale of pay in terms of Government Order No. FD 13 SRP 2002, dated 9th May 2002".

***4. Amendment of rule 5.-*** In sub-rule (1) of rule 5, for the words "with effect from the date of death", the words "from the date following the date of death" shall be substituted.

***5. Insertion of new rule 5A.-*** After rule 5 of the said rules, the following shall be deemed to have been inserted with effect from 1st day of July 2005, namely:-

"5A. (1) A Government Servant who dies while in service after having rendered a qualifying service of not less than seven years, the family pension shall be admissible at an enhanced rate of 50% of emoluments last drawn or twice the family pension normally admissible, whichever is less, for a period of seven years or till the date on which Government Servant would have attained the age of 67 years, if he had survived, whichever is earlier. The family pension payable after the period mentioned above shall be at the rates specified in rule 4A.

Provided that the changes in Family Pension from 1-7-2005 to 31-3-2006 would only be notional and no monetary benefit would accure".

***6. Insertion of new rule 6A.-*** After rule 6 of the said rules, the following shall be deemed to have been inserted with effect from 1st day of July 2005, namely:-

"6A. In the event of death of both father and mother who are Government Servants, on or after first day of July 2007, the family pension payable to minor children under these rules shall be subject to a maximum of Rs.11,970/- per month.

Provided that the changes in Family Pension from 1-7-2005 to 31-3-2006 would only be notional and no monetary benefit would accure."

***7. Insertion of new rule 10A.-*** After rule 10 of the said rules, the following shall be inserted, namely:-

"10A. A Military pensioner, who on retirement from military service, on retiring pension, service pension or invalid pension is governed for the grant of ordinary family pension by Army or Navy or Air Force Instructions under respective rules is appointed to a civil post under the State before attaining the age of superannuation, shall for the purpose of eligibility for the family pension admissible under this rule or the family pension already authorized under the aforesaid Army/Navy/Air Force Instruction, be governed as follows:-

(i) If he dies while holding a civil post, his family shall be allowed family pension under these rules or the family pension authorized at the time of retirement or discharge from the military service, whichever is more advantageous to the family;

(ii) If he has, on appointment to State civil service or post, opted to retain military pension for the past military service:-

(a) and retires from the state civil service or post without earning any pension therefore, his family shall be entitled to family pension as authorized at the time of his retirement/discharge from military service:

(b) retires from state civil service post after becoming eligible for pension therefore, he shall exercise an option at the time of applying for pension for civil service either to be governed by family pension under these rules or to avail family pension benefits as authorized at the time of his retirement or discharge from military service and the said option once exercised shall be final.

(iii) If on appointment to a civil service or post, he has opted to surrender military pension and count the military service for civil pension, his family shall be entitled to family pension under these rules."

***C.S.NO. 04*** By order and in the name of the Governor of Karnataka,

***P. NARAYANA***

Under Secretary to Government

Finance Department (Services-1)

***NOTIFICATION - II***

***No. FD 2 SRA 2010, Bangalore, Dated: 19.11.2010***

Whereas the draft of the following rule further to amend the Karnataka Civil Services Rules was published as required by clause(a) of sub-section-(2) of Section 3 read with section 8 of the Karnataka Civil Services Act, 1978 (Karnataka Act 14 of 1990) in Notification No. FD 02 SRA 2010 dated 13th September, 2010 in Part IVA of the Karnataka Gazette dated 15th September, 2010inviting objection and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on dated 15th September, 2010.

And whereas, no objections and suggestions have been received by the State Government.

Now, therefore, in exercise of the powers conferred by sub-section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rule, namely:-

***RULES***

***1. Title and commencement.-*** (1) These rules may be called the Karnataka Civil Services (6th Amendment) Rules, 2010.

(2) They shall come into force from the date of their publication in the official Gazette.

***2. Insertion of new rule 2 C.-*** In the Karnataka Civil Services Rules, after rule 2B, the following shall be inserted, namely:-

"2C. Notwithstanding anything contained in sub-rule (1) of rule 2, part IV of these rules, shall not be applicable to new recruits to State Government service joining on or after 1st April 2006".

***C.S.NO. 1271*** By order and in the name of the Governor of Karnataka,

***P. NARAYANA***

Under Secretary to Government

Finance Department (Services-1)

***NOTIFICATION - III***

***No. FD 2 SRA 2010, Bangalore, Dated: 19.11.2010***

Whereas the draft of the following rule further to amend the Karnataka Government Servants (Extraordinary Pension) Rules 2003, was published as required by clause(a) of sub-section-(2) of Section 3 read with section 8 of the Karnataka Civil Services Act, 1978 (Karnataka Act 14 of 1990) in Notification No. FD 02 SRA 2010, dated 13th September, 2010 in Part IVA of the Karnataka Gazette dated 15th September, 2010 inviting objection and suggestions from all persons likely to be affected thereby within fifteen days from the date of its publication in the Official Gazette.

Whereas the said Gazette was made available to the public on dated 15th September, 2010.

And whereas, no objections and suggestions have been received by the State Government.

Now, therefore, in exercise of the powers conferred by sub-section(1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following rule, namely:-

***RULES***

***1. Title and commencement.-*** (1) These rules may be called the Karnataka Civil Services (Extraordinary Pension) (1st Amendment) Rules, 2010.

(2) They shall come into force from the date of their publication in the official Gazette.

***2. Amendment of rule 1.-*** In the Karnataka Civil Services (Extraordinary Pension) Rules, 2003, in rule 1, in sub-rule (4) after item (XV), the following shall be inserted, namely:-

"(XVI)New Recruits to the State Government Service joining on or after 1st day of April 2006".

***C.S.NO. 01*** By order and in the name of the Governor of Karnataka,

**P. NARAYANA**
Under Secretary to Government
Finance Department (Services-1)

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಮಂಗಳವಾರ, ನವೆಂಬರ್ ೨೩, ೨೦೧೦ (ಮಾರ್ಗಶಿರ ೨, ಶಕ ವರ್ಷ ೧೯೩೨) | ನಂ. ೧೫೬೬ |
|---|---|---|

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 264 ಎಂಎಲ್ಆರ್ 2010, ಬೆಂಗಳೂರು, ದಿನಾಂಕ 23ನೇ ನವೆಂಬರ್ 2010**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ, ದಿನಾಂಕ 09–11–2010 ರಂದು ನಡೆದ ಉಪ ಚುನಾವಣೆಯಲ್ಲಿ ಮೈಸೂರು ಮಹಾನಗರಪಾಲಿಕೆಯ ಚುನಾಯಿತರಾದ ಅಭ್ಯರ್ಥಿಗಳ ಹೆಸರುಗಳನ್ನು ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ:

| ಕ್ರಮ ಸಂಖ್ಯೆ | ವಾರ್ಡ್ ನಂ. | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀ / ಶ್ರೀಮತಿ) | ಪ್ರವರ್ಗ | ಪಕ್ಷದ ಹೆಸರು |
|---|---|---|---|---|
| 1 | 41 | ಆರ್.ರವೀಂದ್ರ ಕುಮಾರ್,<br>ಬಿನ್: ಎಂ.ರಾಜಪ್ಪಾಜಿ, ನಂ.285,<br>4ನೇ ಮುಖ್ಯ ರಸ್ತೆ, ಸನ್ಮಾರ್ಗ, ಸಿದ್ಧಾರ್ಥ ನಗರ, ಮೈಸೂರು – 11 | ಪರಿಶಿಷ್ಟ ಪಂಗಡ | ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್.ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಮಂಗಳವಾರ, ನವೆಂಬರ್ ೨೩, ೨೦೧೦ (ಮಾರ್ಗಶಿರ ೨, ಶಕ ವರ್ಷ ೧೯೩೨) | ನಂ. ೧೫೬೭ |
|---|---|---|

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 265 ಎಂಎಲ್ಆರ್ 2010, ಬೆಂಗಳೂರು, ದಿನಾಂಕ 23ನೇ ನವೆಂಬರ್ 2010**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ: 14) ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ, ದಿನಾಂಕ 26–09–2010 ರಂದು ನಡೆದ ಉಪ ಚುನಾವಣೆಯಲ್ಲಿ ಬಳ್ಳಾರಿ ಮಹಾನಗರಪಾಲಿಕೆಯ ಚುನಾಯಿತರಾದ ಅಭ್ಯರ್ಥಿಗಳ ಹೆಸರುಗಳನ್ನು ಈ ಮೂಲಕ ಸಾರ್ವಜನಿಕರ ಮಾಹಿತಿಗಾಗಿ ಪ್ರಕಟಿಸಲಾಗಿದೆ:

| ಕ್ರಮ ಸಂಖ್ಯೆ | ವಾರ್ಡ್ ನಂ. | ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ (ಶ್ರೀ / ಶ್ರೀಮತಿ) | ಪ್ರವರ್ಗ | ಪಕ್ಷದ ಹೆಸರು |
|---|---|---|---|---|
| 1 | 1 | ಪಾರ್ವತಿ ಎಸ್. ಇಂದುಶೇಖರ್,<br>ಕೋಂ: ಎಸ್.ಇಂದುಶೇಖರ್, ಪಾರ್ವತಿ ನಗರ, ಮುಖ್ಯ ರಸ್ತೆ, ಬಳ್ಳಾರಿ | ಸಾಮಾನ್ಯ | ಭಾರತೀಯ ಜನತಾ ಪಕ್ಷ |
| 2 | 19 | ಎನ್.ಪಾರ್ವತಿ,<br>ಗಣೇಶ್ ಕಾಲನಿ, ಎಸ್.ಎನ್.ಪೇಟೆ, ಬಳ್ಳಾರಿ | ಸಾಮಾನ್ಯ | ಭಾರತೀಯ ಜನತಾ ಪಕ್ಷ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್.ರವೀಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

# ವಿಶೇಷ ಪತ್ರಿಕೆ

| ಭಾಗ – *I* | ಬೆಂಗಳೂರು, ಮಂಗಳವಾರ, ನವೆಂಬರ್ ೨೩, ೨೦೧೦ (ಮಾರ್ಗಶಿರ ೨, ಶಕ ವರ್ಷ ೧೯೩೨) | ನಂ. ೧೫೬೮ |
| --- | --- | --- |

## ಕರ್ನಾಟಕ ಸರ್ಕಾರದ ನಡವಳಿಗಳು

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಕೊಪ್ಪಳ ಜಿಲ್ಲೆ, ಗಂಗಾವತಿ ನಗರಸಭೆಯ ಕೌನ್ಸಿಲ್‌ಅನ್ನು ರದ್ದುಪಡಿಸುವ ಬಗ್ಗೆ

**ಉಲ್ಲೇಖ:**
(1) ಪೌನಿ:ಎಸ್.ಪಿ.ಆರ್: ಗಂಗಾವತಿ:ಸಿಆರ್:11:09–10 ದಿನಾಂಕ 9.9.2009ರ ಪೌರಾಡಳಿತ ನಿರ್ದೇಶನಾಲಯದ ಆಯುಕ್ತರ ಪತ್ರ

(2) ಸರ್ಕಾರದ ಪತ್ರ ಸಂಖ್ಯೆ ನಅಇ 52 ಟಿಎಂಡಿ 2009 ದಿನಾಂಕ 6.11.2009

(3) ಪೌನಿ:ಎಸ್.ಪಿ.ಆರ್.:ಗಂಗಾವತಿ:ಸಿಆರ್:11:09–10 ದಿನಾಂಕ 27.11.2009

(4) ಶ್ರೀಮತಿ ಲಕ್ಷಮ್ಮ ರಾಮಪ್ಪ, ಮಾಜಿ ಅಧ್ಯಕ್ಷರು, ಹಾಲಿ ಸದಸ್ಯರು, ನಗರಸಭೆ ಗಂಗಾವತಿ ಇವರ ಸಮಜಾಯಿಷಿ ಪತ್ರ ದಿನಾಂಕ 26.12.2009.

(5) ಪೌ.ನಿ.ಎಸ್.ಪಿ.ಆರ್. ಗಂಗಾವತಿ:ಸಿಆರ್:11:09–10 ದಿನಾಂಕ 5.1.2010ರ ಪೌರಾಡಳಿತ ನಿರ್ದೇಶನಾಲಯದ ಆಯುಕ್ತರ ಪತ್ರ.

(6) ಪೌನಿ:ಎಸ್.ಪಿ.ಆರ್.:ಗಂಗಾವತಿ:ಸಿಆರ್:11:09–10 ದಿನಾಂಕ 30.1.2010ರ ಪೌರಾಡಳಿತ ನಿರ್ದೇಶನಾಲಯದ ಆಯುಕ್ತರ ಪತ್ರ

(7) ನಅಇ 52 ಟಿಎಂಡಿ 2009 ದಿನಾಂಕ 17.2.2009 ರ ಸರ್ಕಾರದ ಕಾರಣ ಕೇಳವ ನೋಟೀಸು

(8) ಶ್ರೀಮತಿ ಲಕ್ಕಮ್ಮ ರಾಮಪ್ಪ, ಮಾಜಿ ಅಧ್ಯಕ್ಷರು ಹಾಲಿ ಸದಸ್ಯರು, ನಗರಸಭೆ ಗಂಗಾವತಿ ಇವರು ಅಧ್ಯಕ್ಷರು ಎಂದು ಸಹಿ ಮಾಡಿರುವ ದಿನಾಂಕ 26.12.2009ರ ಪತ್ರ.

(9) ಶ್ರೀಮತಿ ಪಾರ್ವತಮ್ಮ ಯಲ್ಲಪ್ಪ, ಅಧ್ಯಕ್ಷರು, ನಗರಸಭೆ ಗಂಗಾವತಿರವರಿಗೆ ದಿನಾಂಕ 01.04.2010ರಂದು ಕಾರಣ ಕೇಳುವ ನೋಟೀಸಿಗೆ ನೀಡಿರುವ ದಿನಾಂಕ 01.04.2010ರ ಉತ್ತರ.

(10) ಶ್ರೀ ಹುಡ್ಡೇಕರ್ ಬಸಪ್ಪ ನಾಯಕ , ಅಧ್ಯಕ್ಷರು ನಗರಸಭೆ, ಗಂಗಾವತಿರವರಿಗೆ ದಿನಾಂಕ 04.11.2010ರಂದು ನೀಡಿರುವ ಕಾರಣ ಕೇಳುವ ನೋಟೀಸಿಗೆ ನೀಡಿರುವ ದಿನಾಂಕ 09.11.2010ರ ಉತ್ತರ.

1. ಉಲ್ಲೇಖ (1) ರಲ್ಲಿ ಪೌರಾಡಳಿತ ನಿರ್ದೇಶಕರ ವರದಿಯನ್ವಯ ಗಂಗಾವತಿ ನಗರಸಭೆಯಲ್ಲಿ ದಿನಾಂಕ 20.6.2009ರಂದು ನಡೆದ ಸಾಮಾನ್ಯ ಸಭೆಯ ಮುಖ್ಯ ವಿಷಯ ಸ್ಥಾಯಿ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವ ಸಭೆಗೆ ಹಾಜರಾಗುವಂತೆ ನೀಡಿದ ನೋಟೀಸಿನ ಮೇರೆಗೆ ಕೊಪ್ಪಳ ಜಿಲ್ಲೆ ಲೋಕ ಸಭೆ ಸದಸ್ಯರಾದ ಶ್ರೀ ಶಿವರಾಮಗೌಡರು, ವಿಧಾನ ಪರಿಷತ್ ಸದಸ್ಯರಾದ ಶ್ರೀ ಹೆಚ್. ಆರ್. ಶ್ರೀನಾಥ್, ಗಂಗಾವತಿ ಸ್ಥಳೀಯ ಶಾಸಕರಾದ ಶ್ರೀ ಹೆಚ್. ಆರ್. ಶ್ರೀನಾಥ್, ಗಂಗಾವತಿ ಸ್ಥಳೀಯ ಶಾಸಕರಾದ ಶ್ರೀ ಪರಣ್ಣ ಮುನವಳ್ಳಿಯವರು ಸಭೆಗೆ ಹಾಜರಾದಾಗ, ಅಧ್ಯಕ್ಷರಾದ ಶ್ರೀಮತಿ ಲಕ್ಷಮ್ಮ ನಾಯಕ ಹಾಗೂ ಇತರೆ ಸದಸ್ಯರುಗಳು, ಶಾಸಕರು, ಲೋಕಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಸದಸ್ಯರುಗಳಿಗೆ ಮತದಾನದ ಹಕ್ಕಿರುವುದಿಲ್ಲವಾದ್ದರಿಂದ ಅವರನ್ನು ಹೊರಗೆ ಕಳುಹಿಸಿರಿ ಎಂದು ಅಗೌರವ ರೀತಿಯಲ್ಲಿ ವರ್ತಿಸಿದ್ದರಿಂದ, ಜನಪ್ರತಿನಿಧಿಗಳಾದ ಶಾಸಕರು, ಸಂಸದರು, ವಿಧಾನ ಪರಿಷತ್ ಸದಸ್ಯರಿಗೆ ಮತದಾನದ ಹಕ್ಕನ್ನು ಚಲಾಯಿಸಲು ನಿರ್ಬಂಧಿಸಿ ಕಾನೂನಿನ ಸ್ಪಷ್ಟ ಉಲ್ಲಂಘನೆ ಮಾಡಿ, ಅಗೌರವ ತೋರಿಸಿರುವ ಗಂಗಾವತಿ ನಗರಸಭೆ ಸಮಿತಿಯನ್ನು ರದ್ದುಗೊಳಿಸುವಂತೆ ಪ್ರಸ್ತಾಪಿಸಲಾಗಿದೆ.

2. ಉಲ್ಲೇಖ (2) ರ ಸರ್ಕಾರದ ಪತ್ರದಲ್ಲಿ ಮೇಲ್ಕಂಡ ಸಂಬಂಧ ಉಂಟಾಗಿರುವ ಪ್ರಕರಣಕ್ಕೆ ಸಂಬಂಧಿಸಿದಂತೆ ಗಂಗಾವತಿಯ ನಗರಸಭೆಯ ಕೌನ್ಸಿಲ್‌ಅನ್ನು ಏಕೆ ರದ್ದುಪಡಿಸಬಾರದು ಎಂಬುದಕ್ಕೆ ನಗರಸಭೆಯ ಆಡಳಿತ ಮಂಡಳಿಯ ವತಿಯಿಂದ ಹೇಳಿಕೆಯನ್ನು ನಿಯಮಾನುಸಾರ ಕಾಲಾವಕಾಶ ನೀಡಿ, ಸಂಬಂಧಿಸಿದವರಿಂದ ಪಡೆದು, ಸರ್ಕಾರಕ್ಕೆ ಜರೂರಾಗಿ ಒದಗಿಸಲು ನಿರ್ದೇಶಿಸಲಾಗಿದೆ.

3. ದಿನಾಂಕ 27.11.2009ರಂದು ಉಲ್ಲೇಖ (3) ರಲ್ಲಿ ಶ್ರೀಮತಿ ಲಕ್ಕಮ್ಮ ರಾಮಪ್ಪ, ಅಧ್ಯಕ್ಷರು, ನಗರಸಭೆ ಗಂಗಾವತಿ, ಕೊಪ್ಪಳ ಜಿಲ್ಲೆರವರಿಗೆ ಕರ್ನಾಟಕ ಪೌರಸಭಾ ಕಾಯ್ದೆ, 1964ರ ಕಲಂ 361(1)ರಂತೆ ಗಂಗಾವತಿ ನಗರಸಭೆ ಕೌನ್ಸಿಲ್‌ನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಕಾರಣ ಕೇಳುವ ನೋಟೀಸನ್ನು ಜಾರಿಮಾಡಲಾಗಿದೆ.

4. ಉಲ್ಲೇಖ (4) ರಂತೆ ದಿನಾಂಕ 26.12.2009ರಂದು ಶ್ರೀಮತಿ ಲಕ್ಷಮ್ಮ ರಾಮಪ್ಪ, ಮಾಜಿ ಅಧ್ಯಕ್ಷರು, ಹಾಲಿ ಸದಸ್ಯರು, ನಗರಸಭೆ ಗಂಗಾವತಿಯವರು ಈ ಕೆಳಕಂಡಂತೆ ತಮ್ಮ ಸಮಜಾಯಿಷಿಯನ್ನು ನೀಡಿರುತ್ತಾರೆ.

5. ಉಲ್ಲೇಖ (5) ರ ಪತ್ರದ ಮೂಲಕ, ಉಲ್ಲೇಖ (4)ರ ಸಮಜಾಯಷಿಯನ್ನು ಮುಂದಿನ ಕ್ರಮಕ್ಕಾಗಿ ಸರ್ಕಾರಕ್ಕೆ ಸಲ್ಲಿಸಲಾಗಿದೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಸಂಬಂಧ ಸರ್ಕಾರದಿಂದ ನೀಡಿದ ನಿರ್ದೇಶನಗಳ ಅನುಸರಣೆಯಲ್ಲಿ ಲೋಪವಾಗಲೀ, ಉಲ್ಲಂಘನೆಯಾಗಲಿ ಗುರುತಿಸಿಕೊಂಡು ಯಾವುದೇ

ಅನ್ವಯಿತ ಕಾನೂನಿನಡಿಯಲ್ಲಿ ಕಾರ್ಯನಿರ್ವಹಿಸಲು ನಗರಸಭೆಯು ಕಾರಣವಾಗಿರುತ್ತದೆ ಎಂಬುದನ್ನು ಗುರುತಿಸಿಕೊಳ್ಳಬೇಕಾಗಿರುವುದರಿಂದ, ಸದರಿ ಪ್ರಕರಣದಲ್ಲಿ ನ್ಯೂನತೆಯ ಅಥವಾ ಲೋಪದ ಬಗ್ಗೆ ದೂರು ಮತ್ತು ತನಿಖಾ ವರದಿಯ ಮೇಲೆ ಗಮನಿಸಿದ ನ್ಯೂನತೆಯ ಅಂಶ ಹಾಗೂ ಕಾನೂನು, ನಿಯಮ, ಸರ್ಕಾರದ ನಿರ್ದೇಶನಗಳ ಉಲ್ಲಂಘನೆ ಮತ್ತು ಇದಕ್ಕಾಗಿ ನಗರಸಭೆಯ ಜವಾಬ್ದಾರಿಯ ಬಗ್ಗೆ ವರದಿಯನ್ನು ನೀಡಬೇಕೆಂದು ಪೌರಾಡಳಿತ ನಿರ್ದೇಶನಾಲಯದ ಆಯುಕ್ತರಿಗೆ ಸೂಚಿಸಲಾಗಿದೆ. ಉಲ್ಲೇಖ (6)ರಲ್ಲಿ ಸರ್ಕಾರವು ಕೇಳಿರುವ ತುಲನಾತ್ಮಕ ಪಟ್ಟಿಯಂತೆ ಪೂರ್ಣ ವಿವರಗಳನ್ನು ನೀಡಿರುತ್ತಾರೆ.

6. ಉಲ್ಲೇಖ (7)ರಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು, ಇವರ ಉಲ್ಲೇಖ (6)ರ ಕೊಪ್ಪಳ ಜಿಲ್ಲೆ ಗಂಗಾವತಿ ನಗರಸಭೆಯಲ್ಲಿ ಆಡಳಿತದಲ್ಲಿನ ಲೋಪಗಳ ಬಗ್ಗೆ ಸಲ್ಲಿಸಿದ ತನಿಖಾ ವರದಿಯಲ್ಲಿನ ದಾಖಲೆಗಳನ್ನು ಸಮಗ್ರವಾಗಿ ಪರಿಶೀಲಿಸಲಾಗಿದ್ದು ಕೊಪ್ಪಳ ಜಿಲ್ಲೆ ಗಂಗಾವತಿ ನಗರಸಭೆ, ಇವರ ವಿರದ್ಧ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316 ರನ್ವಯ, ಕೆಳಕಂಡ ಆರೋಪಗಳಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿದೆ.

**1. ನ್ಯೂನತೆ ಅಥವಾ ಲೋಪದ ಬಗ್ಗೆ ದೂರು**

ಗಂಗಾವತಿ ನಗರ ಸಭೆಯಲ್ಲಿ ದಿನಾಂಕ: 20-06-2009 ರಂದು ನಡೆದ ಸಾಮಾನ್ಯ ಸಭೆಯ ಮುಖ್ಯ ವಿಷಯ ಸ್ಥಾಯಿ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವ ಸಭೆಗೆ ಹಾಜರಾಗುವಂತೆ ನೀಡಿದ ನೋಟೀಸ್ ಮೇರೆಗೆ ಕೊಪ್ಪಳ ಜಿಲ್ಲೆ ಲೋಕಸಭೆ ಸದಸ್ಯರಾದ ಶ್ರೀ ಶಿವರಾಮಗೌಡರು, ವಿಧಾನ ಪರಿಷತ್ ಸದಸ್ಯರಾದ ಶ್ರೀ ಹೆಚ್.ಆರ್.ಶ್ರೀನಾಥ್ ರವರು ಮತ್ತು ಗಂಗಾವತಿ ಸ್ಥಳೀಯ ಶಾಸಕರಾದ ಶ್ರೀ ಪರಣ್ಣ ಮುನವಳ್ಳಿಯವರು ಸಭೆಗೆ ಹಾಜರಾದಾಗ, ಅಧ್ಯಕ್ಷರಾದ ಶ್ರೀಮತಿ ಲಕ್ಕಮ್ಮ ರಾಮಪ್ಪ ಹಾಗೂ ಇವರು ಇತರೆ ಸದಸ್ಯರುಗಳು, ಶಾಸಕರು, ಲೋಕಸಭಾ ಸದಸ್ಯರು ಹಾಗೂ ವಿಧಾನ ಪರಿಷತ್ ಸದಸ್ಯರುಗಳಿಗೆ ಮತದಾನದ ಹಕ್ಕಿರುವುದಿಲ್ಲವಾದ್ದರಿಂದ ಅವರನ್ನು ಹೊರಗೆ ಕಳುಹಿಸಿರಿ ಎಂದು ಅಗೌರವ ರೀತಿಯಲ್ಲಿ ವರ್ತಿಸಿದ್ದರಿಂದ, ಜನಪ್ರತಿನಿಧಿಗಳಾದ ಶಾಸಕರು, ಸಂಸದರು, ವಿಧಾನ ಪರಿಷತ್ ಸದಸ್ಯರಿಗೆ ಮತದಾನದ ಹಕ್ಕನ್ನು ಚಲಾಯಿಸಲು ನಿರ್ಬಂಧಿಸಿ ಕಾನೂನಿನ ಸ್ಪಷ್ಟ ಉಲ್ಲಂಘನೆ ಮಾಡಿ, ಅಗೌರವ ತೋರಿಸಿರುವ ಗಂಗಾವತಿ ನಗರಸಭೆ ಸಮಿತಿಯನ್ನು ರದ್ದುಗೊಳಿಸುವಂತೆ ದೂರು ಸಲ್ಲಿಸಿರುತ್ತಾರೆ.

**2. ಕಾನೂನು ನಿಯಮ ಸರ್ಕಾರದ ನಿರ್ದೇಶನಗಳ ಉಲ್ಲಂಘನೆ**

ಕರ್ನಾಟಕ ಪುರಸಭೆ ಕಾಯ್ದೆ 1964 ರ ಕಲಂ 11(1)ಸಿ ಮತ್ತು ಡಿ ಪ್ರಕಾರ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ:ನಅಇ 463 ಎಂ.ಎಲ್.ಆರ್. 98 ದಿನಾಂಕ: 24-08-1998 ರ ಸುತ್ತೋಲೆ ಪ್ರಕಾರ ಲೋಕಸಭಾ ಮತ್ತು ವಿಧಾನ ಸಭಾ ಸದಸ್ಯರಿಗೆ ಮುನ್ಸಿಪಲ್ ಕೌನ್ಸಿಲ್‌ನಲ್ಲಿ ಸದಸ್ಯತ್ವರಾಗುವುದರಿಂದ ಸದರಿಯವರು ಮತದಾನದ ಹಕ್ಕನ್ನು ಪಡೆದುಕೊಳ್ಳುತ್ತಾರೆ. 1964 ರ ಕರ್ನಾಟಕ ಪುರಸಭಾ ಕಾಯ್ದೆ ಕಲಂ 48 ರಂತೆ ಸಭಾ ಸೂಚನಾ ಪತ್ರ ನೀಡುವಲ್ಲಿ ನಿಗದಿಪಡಿಸಿದ ಕಾಲಾವಕಾಶದ ಪಾಲನೆಯಾಗಬೇಕಿರುತ್ತದೆ.

**3. ತನಿಖಾ ವರದಿಯ ಮೇಲೆ ಗಮನಿಸಲಾದ ನ್ಯೂನತೆಯ ಅಂಶ**

ಸರ್ಕಾರದ ಸುತ್ತೋಲೆ ಸಂಖ್ಯೆ ನಇ 463 ಎಂಎಲ್ ಆರ್ 98 ದಿನಾಂಕ: 24-08-1998 ರಲ್ಲಿ ಕರ್ನಾಟಕ ಪುರಸಭಾ ಕಾಯಿದೆ ಕಲಂ 11(1)(ಸಿ) ಬಗ್ಗೆ ಲೋಕಸಭಾ ಸದಸ್ಯರು, ವಿಧಾನಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು, ನಗರಸಭೆ ಕೌನ್ಸಿಲ್ ಸದಸ್ಯರಾಗುವರೆಂಬ ಬಗ್ಗೆ ಸ್ಪಷ್ಟೀಕರಣ ನೀಡಿ ಸಭೆಯಲ್ಲಿ ಓದಿ ಹೇಳಿದರು ಹಾಗೂ ಗಂಗಾವತಿ ನಗರಸಭೆ ಪೌರಾಯುಕ್ತರು ಕರ್ನಾಟಕ ಪುರಸಭೆ ಕಾಯಿದೆ ಕಲಂ 11(1)(ಸಿ) ರಂತೆ ಸರ್ಕಾರದಿಂದ ನಾಮಕರಣಗೊಂಡಿರುವ ಸದಸ್ಯರನ್ನು ಹೊರತುಪಡಿಸಿ ಉಳಿದೆಲ್ಲಾ ಸದಸ್ಯರು ಅಂದರೆ ಚುನಾಯಿತ ಸದಸ್ಯರುಗಳು ಸಂಸತ್ ಸದಸ್ಯರು, ವಿಧಾನಸಭೆ ಸದಸ್ಯರು, ವಿಧಾನ ಪರಿಷತ್ ಸದಸ್ಯರು ಇವರುಗಳಿಗೆ ಮತದಾನದ ಹಕ್ಕು ಇರುವುದಾಗಿ ತಿಳಿಸಿದರು, ಕೂಡ ಸಭೆ ಮುಂದೂಡಿರುತ್ತದೆ. ಸ್ಥಾಯಿ ಸಮಿತಿ ರಚಿಸುವ ಸಂಬಂಧ ದಿನಾಂಕ:06-08-2009 ರಂದು ಸಭೆ ನಿಗದಿಪಡಿಸಿ ತದನಂತರ ಮುಂದೂಡಿ, ಅದೇ ದಿನಾಂಕದಂದು ನಡೆದ ಸಭೆ ಕರ್ನಾಟಕ ಪುರಸಭೆ ಕಾಯ್ದೆ ಕಲಂ 48 ರಂತೆ ಸಭಾ ಸೂಚನಾ ಪತ್ರ ನೀಡುವಲ್ಲಿ ನಿಗದಿಪಡಿಸಿದ ಕಾಲಾವಕಾಶದ ಪಾಲನೆಯಾಗದಿರುವುದು ಕಂಡುಬರುತ್ತದೆ.

7. ಉಲ್ಲೇಖ (7) ಕ್ಕೆ ಉತ್ತರವಾಗಿ ದಿನಾಂಕ 26.12.2009ರಂದು ಹಿಂದಿನ ಅಧ್ಯಕ್ಷರಾದ ಶ್ರೀಮತಿ ಲಕ್ಕಮ್ಮರವರು, ಸಮಜಾಯಿಷಿ ನೀಡಿರುತ್ತಾರೆ. ಹಾಗೂ ಮೇಲೆ ಉಲ್ಲೇಖ (10)ರಲ್ಲಿ ಗಂಗಾವತಿ ನಗರಸಭೆಯ ಹಾಲಿ ಅಧ್ಯಕ್ಷರಾದ ಶ್ರೀ ಜಿ. ಬಸಪ್ಪ ನಾಯಕರವರಿಗೆ ಕಾರಣ ಕೇಳುವ ನೋಟೀಸ್ ನೀಡಿದ್ದು, ಉಲ್ಲೇಖ (11)ರಲ್ಲಿ ಅವರಿಂದ ಉತ್ತರಗಳನ್ನು ಪಡೆಯಲಾಗಿದೆ.

8. ಕೊಪ್ಪಳ ಜಿಲ್ಲೆಯ ಗಂಗಾವತಿ ನಗರಸಭೆಯು ದಿನಾಂಕ 20.06.2009ರಲ್ಲಿ ನಡೆದ ಸಾಮಾನ್ಯ ಸಭೆಯಲ್ಲಿ ಆ ದಿನ ಮುಖ್ಯ ವಿಷಯ ಸ್ಥಾಯಿ ಸಮಿತಿಯ ಸದಸ್ಯರನ್ನು ಆಯ್ಕೆ ಮಾಡುವ ಕುರಿತು ಆ ಸಭೆಗೆ ಹಾಜರಾಗುವ ಸಭೆಯಲ್ಲಿ ಮತದಾನದ ಬಗ್ಗೆ ಪ್ರಸ್ತಾವನೆ ಬಂದಾಗ, ಕೊಪ್ಪಳ ಜಿಲ್ಲೆಯ ಲೋಕಸಭಾ ಸದಸ್ಯರು, ಮಾನ್ಯ ವಿಧಾನಸಭಾ ಸದಸ್ಯರು, ವಿಧಾನಪರಿಷತ್ ಸದಸ್ಯರು, ಇವರು ಹಾಜರಾದಾಗ ಅಂದಿನ ನಗರಸಭೆ ಅಧ್ಯಕ್ಷರಾಧ ಶ್ರೀಮತಿ ಲಕ್ಕಮ್ಮ ನಾಯಕ ಹಾಗೂ ಇತರೇ ಸದಸ್ಯರು, ಲೋಕಸಭಾ ಸದಸ್ಯರು ಹಾಗೂ ವಿಧಾನಪರಿಷತ್ ಸದಸ್ಯರುಗಳಿಗೆ, ಶಾಸಕರಿಗೆ ಮತದಾನ ಹಕ್ಕು ಇರುವುದಿಲ್ಲವಾದ್ದರಿಂದ, ಅವರನ್ನು ಹೊರಗೆ ಕಳುಹಿಸಿರಿ ಎಂದು ಅಗೌರವ ರೀತಿಯಲ್ಲಿ ವರ್ತಿಸಿದ್ದರಿಂದ, ಮತದಾನದ ಹಕ್ಕನ್ನು ಚಲಾಯಿಸಲು ನಿರ್ಬಂಧಿಸಿ ಕಾನೂನಿನ ಸ್ಪಷ್ಟ ಉಲ್ಲಂಘನೆ ಮಾಡಿ, ಅಗೌರವ ತೋರಿಸಿರುವ

ಗಂಗಾವತಿ ನಗರಸಭೆಯನ್ನು ರದ್ದುಗೊಳಿಸುವಂತೆ, ಚುನಾಯಿತ ಲೋಕಸಭಾ ಸದಸ್ಯ ಮತ್ತು ವಿಧಾನ ಸಭಾ ಕ್ಷೇತ್ರದ ಶಾಸಕರು ಹಾಗೂ ಕೊಪ್ಪಳ–ರಾಮದುರ್ಗ ಕ್ಷೇತ್ರದ ವಿಧಾನ ಪರಿಷತ್ ಸದಸ್ಯರುಗಳು ದಿನಾಂಕ 21.06.2009 ರಂದು ಮನವಿ ಸಲ್ಲಿಸಿರುತ್ತಾರೆ.

9. ಮನವಿ ಸಲ್ಲಿಸಿದ ನಂತರ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 11(11) (ಸಿ) ಮತ್ತು (ಡಿ) ಪ್ರಕಾರ ಮತ್ತು ಸರ್ಕಾರದ ಸುತ್ತೋಲೆಯ ಪ್ರಕಾರ ಮತದಾರರ ಹಕ್ಕು ಯಾರೆಲ್ಲರಿಗೆ ಇದೆ ಎಂಬುದರ ಬಗ್ಗೆ ಸಭೆಯಲ್ಲಿ ಸ್ಪಷ್ಟೀಕರಣ ನೀಡಿದ್ದರೂ ಸಹಾ ಆಡಳಿತ ಮಂಡಳಿಯಲ್ಲಿ ಅನಗತ್ಯಗೊಂದಲ ಉಂಟಾಗಿರುವ ಹಿನ್ನೆಲೆಯಲ್ಲಿ ಕೌನ್ಸಿಲ್ ಸಭೆ ಮುಂದೂಡಿರುತ್ತದೆ. ದಿನಾಂಕ 06.08.2009 ರಂದು ಪುನಃ ಸ್ಥಾಯಿ ಸಮಿತಿಯ ರಚಿಸುವ ಸಂಬಂಧ ಸಭೆ ನಿಗಧಿಪಡಿಸಿ ಎಲ್ಲಾ ಸದಸ್ಯರಿಗೂ ದಿನಾಂಕ 27.07.2009ರಲ್ಲಿ ಸೂಚನಾ ಪತ್ರವನ್ನು ನೀಡಿದ್ದು, ಆದರೆ ಈ ಮಧ್ಯೆ ನಗರಸಭಾ ಅಧ್ಯಕ್ಷರು ದಿನಾಂಕ05.08.2009 ರಂದು ಗಂಗಾವತಿಯ ಪೌರಾಯುಕ್ತರಿಗೆ ಬರೆದ ಪತ್ರದಲ್ಲಿ ತಮಗೆ ಆರೋಗ್ಯ ಸರಿಯಿರುವುದಿಲ್ಲವೆಂದು, ದಿನಾಂಕ 06.08.2009ರಂದು ನಡೆಯುವ ಸಭೆಯನ್ನು ಕೆಲವು ದಿನಗಳವರೆಗೆ ಮುಂದೂಡುವಂತೆ ವಿಚಾರವನ್ನು ಎಲ್ಲಾ ಸದಸ್ಯರಿಗೆ ತಿಳಿಸಲು ಆದೇಶಿಸಿದ ಮೇರೆಗೆ, ಪೌರಾಯುಕ್ತರು ದಿನಾಂಕ 05.08.2009 ರಂದು ಸುತ್ತೋಲೆಯನ್ನು ಹೊರಡಿಸಿದ್ದು ಅದೇ ದಿನಾಂಕದಲ್ಲೇ ಅಂದರೆ ದಿನಾಂಕ 05.08.2009ರಲ್ಲಿ ಅಧ್ಯಕ್ಷರು, ಪೌರಾಯುಕ್ತರಿಗೆ ಬರೆದ ಪತ್ರದಲ್ಲಿ ದಿನಾಂಕ 06.08.2009ರಂದು ಕರೆದಿದ್ದ ಸಭೆ ಮುಂದೂಡಲು ತಮ್ಮ ಸಹಿಯಿರುವ ಪತ್ರ ನಕಲಿಯಾಗಿದ್ದು, ಆ ಪತ್ರಕ್ಕೆ ತಾನು ಸಹಿ ಮಾಡಿರುವುದಿಲ್ಲ. ಈ ಬಗ್ಗೆ ಏಕಪಕ್ಷೀಯವಾಗಿ ತಮ್ಮ ಗಮನಕ್ಕೆ ತಂದು ವಿಚಾರಿಸದೇ ಸಭೆ ಮುಂದೂಡಿರುವ ಬಗ್ಗೆ ಪತ್ರಗಳನ್ನು ಹಿಂಪಡೆದು ಸಭೆ ನಿಗಧಿಪಡಿಸಿದ ದಿನಾಂಕದಂದು ದಿನಾಂಕ 06.08.2009 ರಂದು ಆ ದಿನವೇ ಸಭೆಯನ್ನು ಜರುಗಿಸಲು ಎಲ್ಲಾ ಸದಸ್ಯರಿಗೂ ರವಾನಿಸುವಂತೆ ನಿರ್ದೇಶಿಸಿದ್ದು ಕರ್ನಾಟಕ ಪುರಸಭೆ ಕಾಯ್ದೆ ಕಲಂ 48ರಂತೆ ಸಭಾ ಸೂಚನಾ ಪತ್ರ ನೀಡುವಲ್ಲಿ ನಿಗಧಿಪಡಿಸಿದ ಕಾಲಾವಕಾಶ ಪಾಲನೆಯಾಗದಿರುವುದು ಕಂಡು ಬರುತ್ತದೆ.

10. ಇದಲ್ಲದೇ, ದಿನಾಂಕ 06.11.2009ರಂದು ಪೌರಾಡಳಿತ ನಿರ್ದೇಶಕರಿಗೆ ಗಂಗಾವತಿ ನಗರಸಭೆಯ ಕೌನ್ಸಿಲ್‌ನ್ನು ಏಕೆ ರದ್ದುಪಡಿಸಬಾರದೆಂಬ ಬಗ್ಗೆ ನಗರಸಭೆಯ ಆಡಳಿತ ಮಂಡಳಿಯವತಿಯಿಂದ ಹೇಳಿಕೆಯನ್ನು ನಿಯಮಾನುಸಾರ ಕಾಲಾವಕಾಶ ನೀಡಿ, ಸಂಬಂಧಿಸಿದವರಿಂದ ಹೇಳಿಕೆಯನ್ನು ಪಡೆಯಲಾಗಿದೆ.

11. ಮೇಲ್ಕಂಡ ಕಾಯ್ದೆಯನ್ವಯ ಅಂದಿನ ನಗರಸಭೆಯ ಅಧ್ಯಕ್ಷರಾದ ಶ್ರೀಮತಿ ಲಕ್ಕಮ್ಮ ನಾಯಕ, ಇವರಿಗೆ ಕಾರಣ ಕೇಳುವ ನೋಟೀಸನ್ನು ಕೊಟ್ಟಿದ್ದು, ಸದರಿ ನೋಟೀಸ್‌ನಲ್ಲಿ ಕಾಯ್ದೆಯ ಪ್ರಕಾರ ನೋಟೀಸ್ ತಲುಪಿದ 15 ದಿನಗೊಳಗಾಗಿ ತಮ್ಮ ಸಕಾರಣಾಯುಕ್ತ ಸಮಜಾಯಿಸಿಯನ್ನು ಸಲ್ಲಿಸತಕ್ಕದ್ದು, ತಪ್ಪಿದಲ್ಲಿ ನಿಯಮಾವಳಿಯ ರೀತ್ಯಾ ಮುಂದಿನ ಕ್ರಮ ಜರುಗಿಸಲು ತಿಳಿಸಿರುವ ಮೇರೆಗೆ ದಿನಾಂಕ 26.12.2009ರಂದು ಮಾಜಿ ಆದ ಹಾಲಿ ನಗರಸಭೆಯ ಸದಸ್ಯರಾದ ಶ್ರೀಮತಿ ಲಕ್ಕಮ್ಮ ನಾಯಕ ಇವರು ತಾನು ದಿನಾಂಕ 06.08.2009ರ ಸಭೆಯ ನಿರ್ಣಯ ಕುರಿತು ಬಂದ ದೂರಿನನ್ವಯ ತಾನು ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ್ದು, ಆ ಸ್ಥಾನಕ್ಕೆ ಭರ್ತಿ ಮಾಡಲು ದಿನಾಂಕ 23.12.2009ರಂದು ಸಭೆ ಗೊತ್ತುಪಡಿಸಿರುತ್ತಾರೆಂದು ತಿಳಿಸಿ, ತಾನು ಹಾಗೂ ಸಹ ಸದಸ್ಯರ ಜೊತೆ ಸಮಾಲೋಚಿಸಿ ತಮ್ಮ ವಿವರಣೆಯನ್ನು ನೋಟೀಸ್‌ಗೆ ಸಲ್ಲಿಸಿರುತ್ತಾರೆ. ಸದರಿಯವರು ಕೊಟ್ಟ ವಿವರಣೆಯನ್ನು ಪರಿಶೀಲಿಸಿದಾಗ, ಆ ಸಭೆ ನಡೆಯುವ ಸಂದರ್ಭದಲ್ಲಿ ಪಕ್ಷಾಂತರದಿಂದ ರಾಜಕೀಯ ಸನ್ನಿವೇಶಗಳು ಇದ್ದ ಕಾರಣ ಮತ್ತು ಹೆಚ್ಚಿನಗೊಂದಲಕ್ಕೆ ಅವಕಾಶವಾಗಬಾರದೆಂಬ ಕಾರಣದಿಂದ ಸದರಿ ವಿಷಯನ್ನು ಮುಂದೂಡಲಾಯಿತೆಂದು ತಿಳಿಸಿದ್ದು, ಅಲ್ಲದೇ ದಿನಾಂಕ 06.08.2009ರಲ್ಲಿ ಸಭೆ ನಿಗಧಿಪಡಿಸಿ ಎಲ್ಲಾ ಸದಸ್ಯರಿಗೆ ದಿನಾಂಕ 27.07.2009ರಲ್ಲಿ ಸೂಚನಾ ಪತ್ರವನ್ನು ಸಹಾ ಹೊರಡಿಸಿದ್ದು ನಿಜವೆಂತಲೂ, ಈ ಮಧ್ಯೆ ದಿನಾಂಕ 05.08.2009ರಲ್ಲಿ ತಮಗೆ ಆರೋಗ್ಯ ಸರಿಯಿಲ್ಲದ ಕಾರಣ, ದಿನಾಂಕ 06.08.2009ರ ಸಭೆಯನ್ನು ಮುಂದೂಡುವಂತೆ ನೀಡಿದ ಪತ್ರ ತನ್ನದಾಗಿರುವುದಿಲ್ಲವೆಂದು ತನ್ನನ್ನು ವಿಚಾರಿಸದೇ ತಪ್ಪಗ್ರಹಿಕೆಯಿಂದ ಮುಂದೂಡಿದ ಸಭೆಯನ್ನು ಅದೇ ದಿನ ನಡೆಸುವಂತೆ ಪೌರಾಯುಕ್ತರಿಗೆ ಪತ್ರ ನೀಡಿ ಯಥಾವತ್ತಾಗಿ ಸಭೆಯನ್ನು ನಡೆಸುವಂತೆ ಮಾಡಲಾಗಿದೆಯೆಂದು ತಿಳಿಸಿದ್ದು ಕಂಡು ಬರುತ್ತದೆ. ಅಂದು ಜರುಗಿದ ಸಭೆಯನ್ನು ಸುಮಾರು 25 ನಿರ್ಣಯಗಳನ್ನು ನಿಯಮಾನುಸಾರ ಹಾಜರಿದ್ದ ಎಲ್ಲಾ ಸದಸ್ಯರ ಸಹಾನುಮತದಿಂದ ನಿರ್ಣಯ ಕೈಗೊಂಡು ಸದಸ್ಯರ ಸಮಿತಿಯ ರಚನೆಯ ಕುರಿತು, ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 63 ಹಾಗೂ ಕರ್ನಾಟಕ ಪುರಸಭೆಗಳ ಪ್ರೋಸೀಜರ್ ಅಂಡ್ ಕಂಡಕ್ಟ್ ಆಫ್ ಬಿಸಿನೆಸ್‌ರೂಲ್ಸ್ 1977ರ ನಿಯಮ 55ರನ್ವಯ 11 ಜನರ ಆಯ್ಕೆಗೆ ಸಭೆಯಲ್ಲಿ ಯಾವುದೇ ವಿರೋಧ ವ್ಯಕವಾಗದೇ ಇರುವುದರಿಂದ ಅವಿರೋಧವಾಗಿ ಆಯ್ಕೆ ಮಾಡಲಾಗಿದೆಯೆಂದು ತಿಳಿಸಿರುತ್ತಾರೆ ಮತ್ತು ನಗರಸಭೆ ಕರ್ತವ್ಯಗಳನ್ನು ಪಾಲನೆ ಮಾಡಲು ವಿಫಲ ಮಾಡಿಲ್ಲ. ನಿಯಮಗಳನ್ನು ಉಲ್ಲಂಘಿಸಿ ನಿರ್ಣಯ ಮಾಡಿರುವುದಿಲ್ಲ ಅಥವಾ ಕಾನೂನಿನಲ್ಲಿರುವ ನಿರ್ದೇಶನಗಳನ್ನು ಉದ್ದೇಶಪೂರ್ವಕವಾಗಿ ಕಡೆಗಣಿಸಿರುವುದಿಲ್ಲ. ಹಾಗೇ ಮಿತಿಮೀರಿ ಅಧಿಕಾರವನ್ನು ದುರುಪಯೋಗ ಮಾಡಿಕೊಂಡಿರುವುದಿಲ್ಲವೆಂದು ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ ಕಾಯ್ದೆ 316(1)ರಲ್ಲಿರುವ ಕಾರಣಗಳು ಇಲ್ಲಿ ನಡೆಯದೇ ಇರುವುದರಿಂದ, ಕೌನ್ಸಿಲ್‌ನ್ನು ರದ್ದುಪಡಿಸಬಾರದೆಂತಲೂ ಉದ್ದೇಶಿತ ನೋಟೀಸ್‌ನ್ನು ಕೈಬಿಡಬೇಕೆಂದು ಶ್ರೀಮತಿ ಲಕ್ಕಮ್ಮ ನಾಯಕ ವಿವರಣೆ ಕೊಟ್ಟಿತ್ತಾರೆ.

12. ದಿನಾಂಕ 19.01.2010 ಮತ್ತು 29.01.2010ರಂದು ಪೌರಾಡಳಿತ ನಿರ್ದೇಶಕರಿಗೆ ನ್ಯೂನತೆ ಮತ್ತು ಲೋಪದ ಬಗ್ಗೆ ದೂರು ಮತ್ತು ತನಿಖಾ ವರದಿಯ ಮೇಲೆ ಗಮನಿಸಿದ ನ್ಯೂನತೆ ಅಂಶಗಳನ್ನು ನಗರಸಭೆಯೇ ಪೂರ್ಣ ಜವಾಬ್ದಾರಿಯೆಂದು, ಆ ಬಗ್ಗೆ ಸ್ಪಷ್ಟೀಕರಣ ನೀಡುವಂತೆ ಆಡಳಿತ ಇಲಾಖೆಯ ಕಾರ್ಯದರ್ಶಿಯವರಿಗೆ ಪತ್ರ ಬರೆದಿದ್ದು, ಅದರಂತೆ ದಿನಾಂಕ 30.01.2010ರಲ್ಲಿ ಆಯುಕ್ತರು, ಪೌರಾಡಳಿತ ನಿರ್ದೇಶನಾಲಯದ ಸ್ಪಷ್ಟೀಕರಣ ನೀಡಿದ್ದು, ಸ್ಪಷ್ಟೀಕರಣ ನೀಡಿದ ಮೇಲೆ ದಿನಾಂಕ 17.03.2010ರಲ್ಲಿ ಕಾರಣ ಕೇಳುವ ನೋಟೀಸನ್ನು ಅಧ್ಯಕ್ಷರು, ನಗರಸಭೆ, ಗಂಗಾವತಿ, ಇವರಿಗೆ ಜಾರಿ ಮಾಡಿದ್ದು, ತನಿಖಾ ವರದಿ ಆಧಾರದ ಮೇಲೆ ಕೊಪ್ಪಳ ಜಿಲ್ಲೆ, ಗಂಗಾವತಿ ನಗರಸಭೆಯ ವಿರುದ್ಧ ಕರ್ನಾಟಕ ಪುರಸಭೆಗಳ ಕಾಯ್ದೆ 316ರನ್ವಯ ಮೂರು ಪ್ರತ್ಯೇಕವಾಗಿ ನ್ಯೂನತೆ ಮತ್ತು ಲೋಪದ ಬಗ್ಗೆ ದೂರು, ಕಾನೂನು ನಿಯಮ ಸರ್ಕಾರದ ನಿರ್ದೇಶನ ಉಲ್ಲಂಘನೆ ಹಾಗೂ ತನಿಖಾ ವರದಿಯ ಮೇಲೆ ಗಮನಿಸಲಾದ ನ್ಯೂನತೆಯ ಗಂಗಾವತಿ ನಗರಸಭೆಯನ್ನು ಏಕೆ

ರದ್ದುಪಡಿಸಬಾರದೆಂಬುದಕ್ಕೆ ಅಧ್ಯಕ್ಷರು, ನಗರಸಭೆ, ಗಂಗಾವತಿ, ಇವರಿಗೆ 15 ದಿನಗಳೊಳಗೆ ಸಮಾಜಾಯಿಸುವಂತೆ ಸ್ವೀಕೃತ ನೊಂದಣಿ ಅಂಚೆ ಮೂಲಕ ಕಳುಹಿಸಿದ್ದು, ಈ ಬಗ್ಗೆ ದಿನಾಂಕ 01.04.2010ರಲ್ಲಿ ಶ್ರೀಮತಿ ಪಾರ್ವತಮ್ಮ ಯಲ್ಲಪ್ಪ, ಅಧ್ಯಕ್ಷರು, ಗಂಗಾವತಿ, ಇವರು ನೋಟೀಸ್ ನಲ್ಲಿ ತಿಳಿಸಿದಂತಹ ವಿಚಾರಗಳೆಲ್ಲವೂ ಯಾವುದೂ ನಡೆದಿಲ್ಲ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ನಿಯಮ 48ರ ಸಭಾ ಸೂಚನಾ ಪತ್ರ ನೀಡುವ ಬಗ್ಗೆ ಯಾವುದೇ ನಿಯಮ ಉಲ್ಲಂಘಿಸಿಲ್ಲ. ಆದ್ದರಿಂದ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316(1)ರಲ್ಲಿರುವ ಕಾರಣಗಳು ಇಲ್ಲಿ ನಡೆಯದೇ ಇರುವುದರಿಂದ ಮತ್ತು ರಾಜಕೀಯ ಪ್ರೇರೇತವಾದ ಒತ್ತಡಗಳಿಗೆ ಮಣಿದು ಮಾಡದೇ ಇರುವ ತಪ್ಪುಗಳಿಗೆ ಕೌನ್ಸಿಲ್‌ನ್ನು ರದ್ದುಪಡಿಸಲು ದೂರು ಮುಂದಾಗ ಬಾರದೆಂದು, ತಾವು ಜಾರಿ ಮಾಡಿರುವ ನೋಟೀಸ್‌ನ್ನು ಕೈಬಿಡಬೇಕೆಂದು ಅಧ್ಯಕ್ಷರು ಉತ್ತರಿಸಿರುತ್ತಾರೆ.

13. ಗಂಗಾವತಿ ನಗರಸಭೆಯಲ್ಲಿನ ಲೋಪಗಳ ಬಗೆಗೆ ಪರಿಶೀಲಿಸಿದಾಗ ಲೋಪವಾಗಿರುವ ಅಂಶಗಳು ಈ ಕೆಳಕಂಡಂತೆ ಇರುತ್ತದೆ:

1. ಗಂಗಾವತಿ ನಗರ ಸಭೆಯಲ್ಲಿ ಸ್ಥಾಯಿ ಸಮಿತಿ ಸದಸ್ಯರ ಸಭೆಯಲ್ಲಿ ಜನಪ್ರತಿನಿಧಿಗಳಿಗೆ ಅಗೌರವ ತೋರಿಸಿರುವ ಬಗೆಗೆ.
2. ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 11(1) ಸಿ ಮತ್ತು ಡಿ ಪ್ರಕಾರ ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 463 ಎಂಎಲ್ ಆರ್ 1998, ದಿನಾಂಕ 24.08.1998 ಸುತ್ತೋಲೆ ಪ್ರಕಾರ ಲೋಕಸಭಾ ಮತ್ತು ವಿಧಾನ ಸಭಾ ಸದಸ್ಯರಿಗೆ ಮುನ್ಸಿಪಲ್ ನಲ್ಲಿ ಸದಸ್ಯತ್ವರಾಗುವುದರಿಂದ ಸದರಿಯವರು ಮತದಾನದ ಹಕ್ಕನ್ನು ಪಡೆದುಕೊಳ್ಳುತ್ತಾರೆ.
3. 1964ರ ಕರ್ನಾಟಕ ಪುರಸಭೆಗಳ ಕಾಯ್ದೆ ಕಲಂ 48ರಂತೆ ಸಭಾ ಸೂಚನಾ ಪತ್ರ ನೀಡುವಲ್ಲಿ ನಿಗಧಿಪಡಿಸಿದ ಕಾಲಾವಕಾಶದ ಪಾಲನೆಯಾಗಬೇಕಾಗಿರುತ್ತದೆ.
4. ಕರ್ನಾಟಕ ಪುರಸಭೆಗಳ ಅಧಿನಿಯಮ 1964ರ ಕಲಂ 49(6)ರಂತೆ ಗಂಭೀರ ಅವ್ಯವಸ್ಥೆ ಉದ್ಭವಿಸಿದೆ.
5. ಸಭೆಯ ಮುಂದೂಡಿಕೆಗೆ ಕಲಂ 56ರ ಸಂದರ್ಭವಿರಲಿಲ್ಲ.

14. ಈ ಬಗ್ಗೆ ಮೇಲ್ಕಂಡ ಲೋಪಗಳನ್ನು ಗಮನಿಸಿದಾಗ, ಮೊದಲಿಗೆ ಸ್ಥಾಯಿ ಸಮಿತಿಯ ಸದಸ್ಯರ ಸಭೆಯಲ್ಲಿ ಜನಪ್ರತಿನಿಧಿಗಳಾದ ಮಾನ್ಯ ಲೋಕಸಭಾ ಸದಸ್ಯರು, ವಿಧಾನ ಸಭಾ ಸದಸ್ಯರು ಹಾಗೂ ಸ್ಥಳೀಯ ಶಾಸಕರು ದಿನಾಂಕ 20.06.2009ರಂದು ಸಭೆಗೆ ಹಾಜರಾದ ಸಂದರ್ಭದಲ್ಲಿ ಅವರಿಗೆ ಮತದಾನದ ಹಕ್ಕಿಲವೆಂದು **'ಹೊರಗೆ ಕಳುಹಿಸಿರೀ'** ಎಂಬ ಶಬ್ದವನ್ನು ಬಳಸಿದ್ದಾರಂಬ ಬಗ್ಗೆ ಪ್ರಸ್ತುತ, ಅಧ್ಯಕ್ಷರು ನಗರಸಭೆಯಿರವರು ನಿರಾಕರಿಸಿದ್ದಾರೆ. ಆದರೆ, ಅಂದಿನ ಅಧ್ಯಕ್ಷರಾದ ಶ್ರೀಮತಿ ಲಕ್ಕಮ್ಮ ನಾಯಕ ರವರ ದಿನಾಂಕ 26.12.2009ರ ಪತ್ರದಲ್ಲಿ ತಿಳಿಸಿರುವ ವಿಚಾರವನ್ನು ಗಮನಿಸಿದಾಗ ಗೊಂದಲದ ವಾತಾವರಣ ಸೃಷ್ಟಿಯಾಗಿದ್ದು, ಸಣ್ಣ ಪುಟ್ಟ ವಿಷಯಗಳನ್ನು ಪ್ರತಿಷ್ಠೆಯಾಗಿ ತೆಗೆದುಕೊಳ್ಳುತ್ತಿದ್ದು, ಅಸಮಾದಾನವಿದ್ದು, ಆ ಸಂದರ್ಭದಲ್ಲಿ ಗೊಂದಲದ ವಾತಾವರಣ ಸೃಷ್ಟಿಯಾಗಿದ್ದ ಹಿನ್ನೆಲೆಯಲ್ಲಿ ಸದರಿ ಆ ದಿನ ನಡೆದ ಸಭೆಯಲ್ಲಿ ಜನ ಪ್ರತಿನಿಧಿಗಳಿಗೆ ಅಗೌರವ ತೋರಿಸಿದ್ದಾರೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆ.

15. 2ನೇ ಲೋಪದ ಬಗ್ಗೆ ಪರಿಶೀಲಿಸಿದಾಗ ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 463 ಎಂಎಲ್ ಆರ್ 1998, ದಿನಾಂಕ 24.08.98ರ ಪ್ರಕಾರ ಹಾಗೂ ಕರ್ನಾಟಕ ಪುರಸಭೆಗಳ ಕಾಯ್ದೆ– 1964ರ ಕಲಂ 11(1) (ಸಿ) ಮತ್ತು (ಡಿ)ನಲ್ಲಿ ತೊರಿಸಿರುವಂತಹ ಲೋಕಸಭಾ ಸದಸ್ಯರು, ವಿಧಾನ ಸಭಾ ಸದಸ್ಯರಿಗೆ ಹಾಗೂ ವಿಧಾನ ಪರಿಷತ್ ಸದಸ್ಯರಿಗೂ ಮತದಾನದ ಮಾಡುವ ಹಕ್ಕನ್ನು ಪಡೆದುಕೊಂಡಿದ್ದು, ಆದರೆ ಕಲಂ 11(ಬಿ)ನಲ್ಲಿ ಕಾಣಿಸಿರುವಂತ 5 ನಾಮನಿರ್ದೇಶನದ ಸದಸ್ಯರುಗಳಿಗೆ ಮಾತ್ರ ಮತ ಚಲಾಯಿಸಲು ಹಕ್ಕು ಪಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿಯೂ ಸಹ ಅಂದಿನ ಸಭೆಯಲ್ಲಿ ಈ ಬಗ್ಗೆ ಗೊಂದಲ ಉಂಟಾಗಿದೆ ಎಂಬ ಬಗ್ಗೆ ಜನಪ್ರತಿಗಳಿಗೆ ಕಲಂ 11(ಸಿ) ಮತ್ತು (ಡಿ)ನಲ್ಲಿ ತೋರಿಸಿರುವ ಚುನಾಯಿತ ಪ್ರತಿನಿಧಿಗಳಿಗೆ ಅಗೌರವ ತೋರಿಸಿರುವಂತೆ ಮೇಲ್ನೋಟಕ್ಕೆ ಕಂಡುಬರುತ್ತದೆ.

16. 3ನೇ ಲೋಪದ ಬಗ್ಗೆ ಕರ್ನಾಟಕ ಪುರಸಭೆಗಳ ಕಾಯ್ದೆ–1964ರ ಕಲಂ 48ರಂತೆ ಸಭಾ ಸೂಚನೆ ಪತ್ರ ನೀಡುವಲ್ಲಿ ನಿಗಧಿಪಡಿಸಿದ ಕಾಲಾವಕಾಶದ ಬಗ್ಗೆ ಹತ್ತು ದಿವಸದ ಪೂರ್ವಭಾವಿಯಾಗಿ ಸಭೆಯ ನಡವಳಿಯ ನೋಟೀಸ್ ನ್ನು ಜಾರಿಮಾಡಬೇಕಂದು ಕಾಯ್ದೆಯಲ್ಲಿರುತ್ತದೆ.

17. 4ನೇ ಲೋಪದ ಬಗ್ಗೆ ಅಧ್ಯಕ್ಷರು ಸದರಿ ಕರೆದಿರುವ ಸ್ಥಾಯಿ ಸಮಿತಿಯ ಸಾಮಾನ್ಯ ಸಭೆಯನ್ನು ನಿಗಧಿಪಡಿಸಿದ ದಿನಾಂಕದ ಹಿಂದಿನ ದಿನ ಅಂದರೆ ದಿನಾಂಕ 05.08.2009ರಲ್ಲಿ ಅಧ್ಯಕ್ಷರಿಗೆ ತಮ್ಮ ಆರೋಗ್ಯ ಸರಿಯಿಲ್ಲದ ಕಾರಣ, ದಿನಾಂಕ 06.08.2009ರಂದು ನಡೆಯುವ ಸಭೆಯನ್ನು ಮುಂದೂಡುವಂತೆ ಪೌರಾಯುಕ್ತರಿಗೆ ಸುತ್ತೋಲೆಯನ್ನು ಹೊರಡಿಸಿದ್ದು, ಪುನಃ ಅದೇ ದಿನ ತಮ್ಮ ಲೇಟರ್ ಹೆಡ್ ನಲ್ಲಿ ಸಹಿ ಇರುವ ಪತ್ರ ನಕಲಿಯಾಗಿದ್ದು, ರವಾನಿಸಲಾದ ಪತ್ರಗಳನ್ನು ಹಿಂಪಡೆದು ನಿಗಧಿ ಪಡಿಸಿದ ದಿನಾಂಕದಂದು ಸಭೆಯನ್ನು ಜರುಗಿಸಲು ಎಲ್ಲಾ ಸದಸ್ಯರಿಗೂ ರವಾನಿಸುವಂತೆ ನಿರ್ದೇಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 48ರಂತೆ ಸಭಾ ಸೂಚನಾ ಪತ್ರ ನೀಡುವಲ್ಲಿ ಅವ್ಯವಸ್ಥೆಯಾಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

18. ಮೇಲೆ 4ನೇ ಲೋಪದ ಅಂಶದ ಬಗ್ಗೆ ವಿವರವಾಗಿ ತಿಳಿಸಿದ್ದು, ಕರ್ನಾಟಕ ಪುರಸಭೆಗಳ ಕಾಯ್ದೆ–1964ರ ಕಲಂ 49(6)ರ ಪ್ರಕಾರ ಸಭೆಯನ್ನು ಮುಂದೂಡಲ್ಪಟ್ಟು, ಪುನಃ ಅದೇ ದಿನ ರವಾನಿಸಲಾದಂತಹ ಪತ್ರಗಳನ್ನು ಹಿಂಪಡೆದಿರುವ ಹಿನ್ನೆಲೆಯಲ್ಲಿ, ಸಭೆ ನಿಗಧಿಪಡಿಸಿದ ದಿನಾಂಕ ಗಂಭೀರದ ಅವ್ಯವಸ್ಥೆ ಉಂಟಾದ ಕಾರಣ ಸಭಾ ಸೂಚನಾ ಪತ್ರ ನೀಡುವಲ್ಲಿ ನಿಗಧಿಪಡಿಸಿದ ಕಾಲಾವಕಾಶ ಪಾಲನೆಯಾಗದಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ.

19. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯರವರು ನೀಡಿರುವ ಅಭಿಪ್ರಾಯ ಕರ್ನಾಟಕ ಪುರಸಭೆಗಳ ಕಾಯ್ಕೆ–1964ರ ಕಲಂ 316(1) ಈ ಕೆಳಗಿನಂತಿರುತ್ತದೆ.

316. Power of Government to (dissolve) a municipal council in certain circumstances: (1) If, in the opinion of Government any municipal council is not competent to perform, or persistently makes default in the performance of the duties imposed on it or undertaken by it by or under this Act, or any other law, or exceeds or abuses its power or refuses to carry out the directions given to it under the provisions of this Act or any other law (or is functioning in a manner prejudicial to the (Municipal Council) the Government may, by an order published, together with a statement of the reasons therefore, in the Official Gazette, declare the municipal council to be incompetent or in default, or to have exceeded or abused its powers, as the case may be, and amy (dissolve it):

provided that before making an order of (dissolution) as aforesaid reasonable opportunity shall be given to the municipal council to show cause why such order should not be made.

(2) When the municipal council is (dissolved) by an order under sub-section(1) the following consequences shall ensue,- (i) all the councillors of the municipal council shall, on such date as may be specified in the order vacate their office as such councillors without prejudice to their eligibility for elelction

(under sub-section (3));

(ii) during the period of (dissolution) of the municipal council, all powers and duties conferred and imposed on the municipal council by or under this Act or any other law shall be exercised and performed by such officer as the Government may from time to time appoint in that behalf;

(iii) all property vested in the municipal council shall, until it is reconstituted, vest in the Government.

20. ಮೇಲೆ ಹೇಳಿದ ಎಲ್ಲಾ ಕಾರಣಗಳು ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316(1)ರನ್ವಯ ಕೊಪ್ಪಳ ಜಿಲ್ಲೆಯ ಗಂಗಾವತಿ ನಗರಸಭೆಯಲ್ಲಿ ದಿನಾಂಕ 20.06.2009ರಲ್ಲಿ ನಡೆದ ಸಾಮಾನ್ಯ ಸಭೆಯಲ್ಲಿ ನಡೆದಿದೆ ಎನ್ನಲಾದ ಅನಗತ್ಯಗೊಂದಲ ಸೃಷ್ಟಿಸಿರುವ ಕಾರಣ, ಜನಪ್ರತಿನಿಧಿಗಳಿಗೆ ಆ ದಿನ ಅಗೌರವ ರೀತಿಯಲ್ಲಿ ವರ್ತಿಸಿದ್ದರಿಂದ, ಜನ ಪ್ರತಿನಿಧಿಗಳಾದ ಶಾಸಕರು ಮತ್ತು ಸಂಸದರು, ವಿಧಾನ ಪರಿಷತ್ ಸದಸ್ಯರು, ಇವರಿಗೆ ಮತದಾನದ ಹಕ್ಕನ್ನು ಚಲಾಯಿಸಲು ನಿರಾಕರಿಸಿದ್ದು, ಬೇಸರ ತಂದಿದ್ದ ಹಿನ್ನೆಲೆಯಲ್ಲಿ ಹಾಗೂ ಕಾನೂನಿನ ಸ್ಪಷ್ಟ ಉಲ್ಲಂಘನೆ ಮಾಡಿರುವ ಹಿನ್ನೆಲೆಯಲ್ಲಿ, ಮೇಲೆ ತಿಳಿಸಿರುವ ಲೋಪಗಳ ಬಗ್ಗೆ ಹಾಗೂ ನಿಗಧಿಪಡಿಸಲಾದಂತಹ ಸಭಾ ಸೂಚನಾ ಪತ್ರ ನೀಡುವಲ್ಲಿ ಕಾಲಾವಕಾಶದ ಪಾಲನೆಯಾಗದಿರುವುದರಿಂದ. ಸರ್ಕಾರವು, ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316ರನ್ವಯ ಕ್ರಮಕೈಗೊಳ್ಳಬಹುದಾಗಿದೆ.

21. ಕಾರಣ ಕೇಳುವ ನೋಟೀಸಿಗೆ ಕೊಟ್ಟಿರುವ ಹೇಳಿಕೆಯನ್ನು ಮತ್ತು ಮೇಲ್ಕಂಡ ಅಂಶಗಳನ್ನು ಗಮನಿಸಿದಾಗ ಕರ್ನಾಟಕ ಮುನಿಸಿಪಾಲಿಟೀಸ್ ಕಾಯ್ದೆಯಡಿಯಲ್ಲಿನ ಶಾಸನಬದ್ದ ಹೊಣೆಗಾರಿಕೆ ನಿರ್ವಹಿಸುವಲ್ಲಿ ಗಂಭೀರವಾದ ಲೋಪವಾಗಿದೆಯೆಂಬ ಸತ್ಯಾಂಶವನ್ನು ಮೇಲೆ ವಿವರಿಸಲಾಗಿದೆ ಹಾಗೂ ಕಾಯ್ದೆ ನಿಯಮಗಳನ್ನು ಮತ್ತು ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿ, ಕಾನೂನು ಉಲ್ಲಂಘನೆಯಾಗಿದೆಯೆಂದು ಮತ್ತು ನಗರಸಭೆಯು ತನ್ನ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿದೆ ಎಂದು ಕಂಡುಬರುತ್ತದೆ. ಆದಕಾರಣ, ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316 ರನ್ವಯ ಕೊಪ್ಪಳ ಜಿಲ್ಲೆ, ಗಂಗಾವತಿ ನಗರಸಭೆಯ ಕೌನ್ಸಿಲ್‌ಅನ್ನು ಅಧ್ಯಕ್ಷರು ಮತ್ತು ಸದಸ್ಯರುಗಳನ್ನೊಳಗೊಂಡಂತೆ ಕೂಡಲೇ ವಜಾ ಗೊಳಿಸಿ ಕೊಪ್ಪಳ ಜಿಲ್ಲಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವುದು, ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಅತ್ಯಂತ ಸೂಕ್ತವೆಂದು ಸರ್ಕಾರವು ಪರಿಗಣಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ನಅಇ 52 ಟಿಎಂಡಿ 2009, ಬೆಂಗಳೂರು, ದಿನಾಂಕ 18.11.2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಗಂಗಾವತಿ ನಗರಸಭೆಯು ಕರ್ನಾಟಕ ಮುನಿಸಿಪಾಲಿಟೀಸ್ ಕಾಯ್ದೆಯಡಿಯಲ್ಲಿನ ಶಾಸನಬದ್ಧ ಹೊಣೆಗಾರಿಕೆ ನಿರ್ವಹಿಸುವಲ್ಲಿ ಗಂಭೀರವಾದ ಲೋಪವಾಗಿದೆಯೆಂಬ ಸತ್ಯಾಂಶವನ್ನು ಮೇಲೆ ವಿವರಿಸಲಾಗಿದೆ ಹಾಗೂ ಕಾಯ್ದೆ ನಿಯಮಗಳನ್ನು ಮತ್ತು ಸರ್ಕಾರದ ಸೂಚನೆಗಳನ್ನು ಉಲ್ಲಂಘಿಸಿ, ಕಾನೂನು ಉಲ್ಲಂಘನೆಯಾಗಿದೆಯೆಂದು ಮತ್ತು ನಗರಸಭೆಯು ತನ್ನ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿದೆ ಎಂಬ ಸತ್ಯಾಂಶವನ್ನು ಪರಿಗಣಿಸಿ, ಕರ್ನಾಟಕ ಪುರಸಭೆಗಳ ಕಾಯ್ದೆ 1964ರ ಕಲಂ 316 ರನ್ವಯ ಕೊಪ್ಪಳ ಜಿಲ್ಲೆ, ಗಂಗಾವತಿ ನಗರಸಭೆಯ ಕೌನ್ಸಿಲ್‌ಅನ್ನು ಅಧ್ಯಕ್ಷರು ಮತ್ತು ಸದಸ್ಯರುಗಳನ್ನೊಳಗೊಂಡಂತೆ ಕೂಡಲೇ ವಜಾ ಗೊಳಿಸಿ ಕೊಪ್ಪಳ ಜಿಲ್ಲಾಧಿಕಾರಿಗಳನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡುವುದು, ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಅತ್ಯಂತ ಸೂಕ್ತವೆಂದು ಸರ್ಕಾರವು ಪರಿಗಣಿಸಿದೆ.

ಆದ್ದರಿಂದ ಈಗ ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 316ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಗಂಗಾವತಿ ನಗರಸಭೆಯನ್ನು ತಕ್ಷಣ ಜಾರಿಗೆ ಬರುವಂತೆ ವಿಸರ್ಜಿಸಿದೆ.

ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 316ರಡಿ ಗಂಗಾವತಿ ಪುರಸಭೆಯ ಸದಸ್ಯತ್ವನ್ನು ತಕ್ಷಣ ಜಾರಿಗೆ ಮತ್ತು ಪುರಸಭೆಯ ಸದಸ್ಯರು ಮುಂದಿನ ಚುನಾವಣೆಯಲ್ಲಿ ಸ್ಪರ್ಧಿಸುವ ಅರ್ಹತೆಗೆ ಬಾಧಕವಾದಂತೆ ಮುಕ್ತಾಯಗೊಳಿಸಿದೆ.

ಕರ್ನಾಟಕ ಪುರಸಭೆ ಕಾಯ್ದೆ 1964ರ ಕಲಂ 316ರಡಿ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರವು ಕೊಪ್ಪಳ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಗಂಗಾವತಿ ಪುರಸಭೆಯ ಆಡಳಿತಾಧಿಕಾರಿಯನ್ನಾಗಿ ನೇಮಿಸಿದೆ. ಪುರಸಭೆಯ ವಿಸರ್ಜಿತ ಅವಧಿಯಲ್ಲಿ ಪುರಸಭೆಯ ಆಡಳಿತಾಧಿಕಾರಿಗಳು ಕರ್ನಾಟಕ ಪುರಸಭೆ ಕಾಯ್ದೆಗಳು ಮತ್ತು ಇತರೆ ಯಾವುದೇ ಕಾನೂನಿನಲ್ಲಿ ಪುರಸಭೆಗೆ ಮತ್ತು ಪುರಸಭೆಯ ಸ್ಥಾಯಿ ಸಮಿತಿಗಳಿಗೆ ಪ್ರದತ್ತವಾದ ಮತ್ತು ವಹಿಸಲಾದ ಅಧಿಕಾರಗಳನ್ನು ಮತ್ತು ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಆರ್. ರವೀಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

---

**ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು.**